# ಅಪರಂಜಿ

ಸಂಪುಟ–೧
ಸಂಚಿಕೆ–೨
ಏಪ್ರಿಲ್ ೧೯೮೪

## ತಿಳಿನಗೆಯ ಕಾರಂಜಿ




ಈ ಸಂಚಿಕೆಯ ಲೇಖಕರು

ಡಾ|| ಕೆ. ಕೃಷ್ಣಮೂರ್ತಿ,
ಆನಂದ್, ಶೀನೂ,
ದಾಶರಥಿ ದೀಕ್ಷಿತ್, ಕುಮಾರ್,
ಆರ್.ಎಸ್. ನಾಗಭೂಷಣ್,
ರಮ್ಯ, ಜ್ಯೋತ್ಸ್ನಾ ಕಾಮತ್,
ಶಿವಕುಮಾರ್, ವಿನಾಯಕ ಶೇಟ್,
ಲೀಲಾ ಮಿರ್ಜಿ, ಶ್ರೀರಂಗ,
ಲಾಂಗೂಲಾಚಾರ್ಯ,
ಅ.ರಾ.ಸೇ., ಪೀಟಿ,
ಕಾಶ್ಯಪ ಮತ್ತು ಇತರರು

ಗೌರವ ಸಲಹಾ ಸಂಪಾದಕ : ಅ.ರಾ.ಸೇ.
ಸಂಪಾದಕ : ಆರ್. ಶೇಷಗಿರಿರಾವ್
ನಿರ್ವಹಣೆ : ಶಿವಕುಮಾರ್

ಮೂಸ್‌ಕಾಟ್ ಆಗ್ರೋ ಕೆಮಿಕಲ್ಸ್
ಪ್ರೈವೇಟ್ ಲಿಮಿಟೆಡ್

93, 3ನೇ ಘಟ್ಟ,

ಪೀಣ್ಯ ಇಂಡಸ್ಟ್ರಿಯಲ್ ಏರಿಯಾ,

ಬೆಂಗಳೂರು - 560 058



ದೂರವಾಣಿ : 38902 ತಂತಿ : 'ಮೂಸ್‌ಕಾಟ್' ಟೆಲೆಕ್ಸ್ : 845-580

ಭತ್ತ, ಕಬ್ಬು, ಮತ್ತು ಗೋಧಿಯ ಬೆಳೆಗಳಲ್ಲಿ ಕಳೆ ನಿಯಂತ್ರಣ ಮಾಡುವುದಕ್ಕೆ
"ನಾಕ್ವೀಡ್" ಕಳೆ ನಾಶಕವನ್ನು ಉಪಯೋಗಿಸಿ,

ಎಚ್ ಇ ಟಿ
ಆಮದು ಬದಲು ಉತ್ಪಾದನೆಯಲ್ಲಿ
ರಾಷ್ಟ್ರೀಯ ಪ್ರಶಸ್ತಿ ವಿಜೇತರು
15 ಆಗಸ್ಟ್ 1981



ಆರ್.ಎಫ್.ಕೋ ಆಕ್ಸಿಲ್ ಕನೆಕ್ಟರ್, ಅಂತರ ರಾಷ್ಟ್ರೀಯ ಸೈನಿಕ ಸಾಮಗ್ರಿಗಳಿಗೆ
ಬಿಡಿ ಭಾಗಗಳು ಮತ್ತಿತರ ಅತಿ ನಿಖರ ಉತ್ಪಾದನಗಳು.
ದೇಶೀಯ ತಾಂತ್ರಿಕ ನೈಪುಣ್ಯತೆಯಿಂದ
ಆಮದು ಸರಕುಗಳಿಗೆ ಬದಲು ಉತ್ಪಾದನೆ
ನಮ್ಮ ಗುರಿ.

**ಹಿಂದೂಸ್ಥಾನ್ ಎಲೆಕ್ಟ್ರೋ ಟೆಕ್ನಾಲಜಿ**

**ಪ್ರೈವೇಟ್ ಲಿಮಿಟೆಡ್**

ಇಲೆಕ್ಟ್ರಾನಿಕ್ ಎಸ್ಟೇಟ್, ಪೀಣ್ಯ
ಬೆಂಗಳೂರು 560058

ಟೆಲೆಕ್ಸ್: 0345-8266 ಕೇಬಲ್ : ಹಿಂದೆಲೆಕ್
ಟೆಲಿಫೋನ್-38480., 38726.
ಕಾರ್ಖಾನೆಗಳು ಪೀಣ್ಯ, ಬೆಂಗಳೂರು ರಾಜಾಜಿನಗರ, ಬೆಂಗಳೂರು

ಅಪರಂಜಿ

ಗೌರವ ಸಲಹೆಗಾರರು

ಶ್ರೀ ಅ.ರಾ.ಸೇ.

ಶ್ರೀ ಶಿವಕುಮಾರ್

ಪ್ರಕಾಶಕರು ಮತ್ತು ಸಂಪಾದಕರು

ಶ್ರೀ ಶೇಷಗಿರಿ

ವಾರ್ಷಿಕ ಚಂದಾ : ರೂ. 25-00

ಮುದ್ರಣ

ಬೃಂದಾವನ ಮುದ್ರಣ, ಜಯನಗರ, ಮೈಸೂರು-14

---

ಮನವಿ

ಕೊರವಂಜಿ, ಅಪರಂಜಿಯೊಡನೆ ನಾಡಿಗೆ ಬಂದಿದ್ದಾಳೆ. ಕೊರವಂಜಿ ಬಳಗದವರು, ಹೊಸ ಲೇಖಕರೊಂದಿಗೆ ನಿಮಗಾಗಿ ತಿಳಿನಗೆಯ ಹೊನಲನ್ನು ಹರಿಸುತ್ತಾರೆ. ಸದ್ಯಕ್ಕೆ ಚಂದಾದಾರರಿಗೆ ಮಾತ್ರ ಅಪರಂಜಿ ಲಭ್ಯ. ವಾರ್ಷಿಕ ಚಂದಾ ರೂ. 25-00 ನೀವೂ, ನಿಮ್ಮ ಮಿತ್ರರೂ ಚಂದಾದಾರರಾಗಿ, ಜಾಹಿರಾತು ಕೊಡಿ. ಲೇಖಕರೂ, ವ್ಯಂಗ್ಯ ಚಿತ್ರಕಾರರೂ ತಮ್ಮ ಕೃತಿಗಳನ್ನು ಕಳಿಸಿಕೊಡಲು ಪ್ರಾರ್ಥನೆ. ಅಪರಂಜಿ ನಿಮ್ಮದು. ಅದರ ಅಭಿವೃದ್ಧಿ ನಿಮಗೆ ಸೇರಿದ್ದು. ಚಂದಾ ಹಣವನ್ನು ಮನಿಆರ್ಡರ್ ಅಥವಾ ಡ್ರಾಫ್ಟ್ ಮೂಲಕ ಕಳಿಸಿಕೊಡಿ.

ಆರ್. ಶೇಷಗಿರಿರಾವ್

ದುರ್ಗಾಲಯ, ವಿ.ಪಿ. ವಿಸ್ತರಣ,

ಚಿತ್ರದುರ್ಗ-೫೭೭೫೦೧

---

ಮನವಿ : ಅನಿವಾರ್ಯ ಕಾರಣಗಳಿಂದ ಚಂದಾದಾರರಿಗೆ ಕೆಲವು ಪ್ರತಿಗಳು ತಲುಪಿಲ್ಲವೆಂದು ತಿಳಿದುಬಂದಿದೆ. ಅಂತಹ ಚಂದಾದಾರರು ಸಂಪಾದಕರನ್ನು ಸಂಪರ್ಕಿಸಲು ಪ್ರಾರ್ಥನೆ.

---

# ಅಪರಂಜಿ

ಸಂಪುಟ-೧ ಚೈತ್ರ ೧೯೮೪ ಸಂಚಿಕೆ-೨

( ಯುಗಾದಿ ಸಂಚಿಕೆ )

---

ಅದು ಸತ್ಯ. ಅದು ಆತ್ಮ, ಶ್ವೇತಕೇತು. ನೀನು ಅದೇ ಆಗಿರುವೆ. —ಛಾಂದೋಗ್ಯ

---

ರಕ್ತಾಕ್ಷಿ ಸಂವತ್ಸರವು ಲೋಕಕ್ಕೆ ಸುಖಶಾಂತಿಗಳನ್ನು ತರಲಿ ಎಂಬುದು ಅಪರಂಜಿಯ ಹಾರೈಕೆ.

ಖಾಸಗೀ ಪ್ರಸಾರಕ್ಕೆ ಮಾತ್ರ ಲಭ್ಯವಿದ್ದ 'ಅಪರಂಜಿ' ಈಗ ಮುಕ್ತ ಮಾರುಕಟ್ಟೆಯತ್ತ ಹೊರಟಿದ್ದಾಳೆ. 'ಅಪರಂಜಿ'ಯ ನೆರವಿಗೆ ಬಂದ ಶ್ರೀ ಎಚ್. ಹನುಮಂತಪ್ಪನವರು, ಶ್ರೀ ಜಡೆ ಶೇಷಾದ್ರಿಯವರು ಮೊದಲಾದ ಹಲವರನ್ನು ಅಪರಂಜಿ ಸ್ಮರಿಸುತ್ತಾಳೆ. ಹಲವು ವಿಧದಿಂದ ನೆರವಿಗೆ ಬಂದ ಅನೇಕ ಮಿತ್ರರು ಫಲದಾಶೆಯಿಲ್ಲದೆ ದಕ್ಷತೆಯಿಂದ ಅಪರಂಜಿಗಾಗಿ ದುಡಿದಿದ್ದಾರೆ.

ಇದುವರೆಗೆ ಚಂದಾದಾರರಾದ ಮಹನೀಯರು, ಜಾಹಿರಾತುದಾರರು, ತಾವು 'ಅಪರಂಜಿ'ಯ ಅಭಿಮಾನೀ ಪೋಷಕರೆಂಬ ಹೆಮ್ಮೆಯನ್ನು ಹೊಂದಿದ್ದಾರೆ.

ದಿ|| ರಾ ಶಿ ಯವರ ಮೆಚ್ಚುಗೆ ಪಾತ್ರಳಾದ ಅಪರಂಜಿ, ಶ್ರೀ ನಾ. ಕಸ್ತೂರಿಯವರ ಆಶೀರ್ವಾದ ಪಡೆದಿದ್ದಾಳೆ. ಕೊರವಂಜಿ ಬಳಗದ ಲೇಖಕರೇ ಅಪರಂಜಿ ಬಳಗದವರು. ಅವರೊಂದಿಗೆ ಅನೇಕ ಹೊಸಲೇಖಕರೂ ಸೇರಿ ಪ್ರಬುದ್ಧವಾದ ಶುಚಿಯಾದ ಹಾಸ್ಯದ ಹೊನಲನ್ನೂ ಹರಿಸುವಲ್ಲಿ ಯಶಸ್ವಿಗಳಾಗಿರುವರೆಂಬ ನಂಬುಗೆ ನಮಗಿದೆ.

'ಯುಗಾದಿ' ಸಂಚಿಕೆ ಹೊರತರಲು ನೆರವಾದ ಎಲ್ಲರಿಗೂ ಅಪರಂಜಿ ಕೃತಜ್ಞತೆಗಳನ್ನು ಸಲ್ಲಿಸುತ್ತಾಳೆ.

—ಸಂಪಾದಕ

( ಸಂಸ್ಕೃತ ನಗೆಹನಿ )

## ಕನ್ಯಾದಾನ

—ಡಾ॥ಕೆ. ಕೃಷ್ಣಮೂರ್ತಿ

ಪರೀಕ್ಷ್ಯ ಸತ್ಕುಲಂ ವಿದ್ಯಾಂ
ವಯಃ ಶೌರ್ಯಂ ಸುಶೀಲತಾಮ್
ವಿಧಿರ್ದದಾತಿ ನಿಪುಣಃ
ಕನ್ಯಾಮಿವ ದರಿದ್ರತಾಮ್

ಬ್ರಹ್ಮನಿಗೆ ದಾರಿದ್ರ್ಯವೆಂಬ ಕನ್ಯೆಯೂ ಮಗಳೇ. ಮಗಳಿಗೆ ಸರಿಯಾದ ಅಳಿಯನನ್ನು ತಾನೇ ಹುಡುಕಿ ತರಬೇಕು. ಆದ್ದರಿಂದ ಚೆನ್ನಾಗಿ ಪರೀಕ್ಷೆ ಮಾಡಿ ಯಾರಿಗೆ ಒಳ್ಳೆಯ ವಂಶದಲ್ಲಿ ಜನ್ಮವಾಗಿದೆ, ಯಾರಿಗೆ ಒಳ್ಳೆಯ ವಿದ್ಯೆಯಿದೆ, ಯಾರಿಗೆ ಒಳ್ಳೆಯ ತಾರುಣ್ಯವಿದೆ, ಯಾರಿಗೆ ತುಂಬಾ ಶೌರ್ಯವಿದೆ, ಯಾರಿಗೆ ಒಳ್ಳೊಳ್ಳೆಯ ಗುಣವಿದೆ, ಅವರನ್ನೇ ಹುಡುಕಿ ಹುಡುಕಿ ತನ್ನ ಕನ್ಯೆಗೆ ಮದುವೆ ಮಾಡುತ್ತಾನೆ.

---

ಈ ಸಂಚಿಕೆಯಲ್ಲಿ

# ಅಪರಂಜಿ ಕಿಡಿ

—ಆನಂದ್

1. ರಾಷ್ಟ್ರದಲ್ಲೆಲ್ಲ ಅಶಾಂತಿಯು ಬೇವನ್ನು ತಿನ್ನುತ್ತಿರುವ ಜನತೆಗೆ, ಯುಗಾದಿ ಬೆಲ್ಲವನ್ನೂ ಉಣಿಸಲಿ ಎಂದು ಅಪರಂಜಿ ಹಾರೈಸುತ್ತಾಳೆ.

2. ಹಿಂದುಳಿದ ಜನರಿಗೆ ಬ್ಯಾಂಕ್ ಸಾಲ ಕೊಡಲಿಲ್ಲ ಎಂದು ಸಚಿವ ಶ್ರೀ ಪೂಜಾರಿಯವರು ರೇಗಿದರಂತೆ. —ಪತ್ರಿಕೆ

ಪೂಜಾರಿಯವರೇ ವರ ಕೊಟ್ಟರೂ ಮ್ಯಾನೇಜರ್ ಕೊಡಲಿಲ್ಲ !

3. ಶ್ರೀಮತಿ ಇಂದಿರಾಗಾಂಧಿ ಲಾಯರುಗಳು ತಮ್ಮ ಆರ್ಥಿಕ ಜವಾಬ್ದಾರಿಯನ್ನು ಮರೆಯುವಂತಿಲ್ಲ ಎಂದರಂತೆ. —ಸುದ್ದಿ

ಮೊನ್ನೆ ನಾವು ಭೇಟಿ ಮಾಡಿದ ಲಾಯರಿಗೆ ಈ ಸೂತ್ರ ಚೆನ್ನಾಗಿ ಮನದಟ್ಟು ಆದಂತೆ ಕಂಡಿತು !

4. ಶ್ರೀಮತಿ ವೈಜಯಂತಿಮಾಲ ಕಾಂಗ್ರೆ ಸೇರಿದ್ದಾರೆ —ಪತ್ರಿಕೆ

ಇನ್ನು ಯಾವ ತಾಳಕ್ಕೆ ಯಾವ ನೃತ್ಯವೋ ಕಾದು ನೋಡಬೇಕು,

5. ವಿರೋಧ ಪಕ್ಷದ ವಿಧಾನಸಭಾ ಸದಸ್ಯರು ವಾಕ್‌ಸ್ವಾತಂತ್ರ್ಯಕ್ಕಿಂತ ವಾಕ್‌ಔಟ್ ಸ್ವಾತಂತ್ರ್ಯದಲ್ಲೇ ಮಗ್ನರಾಗಿದ್ದಾರಲ್ಲ ಅಂತ ಮಿತ್ರರೊಬ್ಬರು ಕಳವಳ ಪಡ್ತಿದ್ದಾರೆ.

6. ಎಂ. ಎಲ್'. ಎ.ಗಳು ಸಾರ್ವಜನಿಕ ಸೇವಕರಲ್ಲ —ಸುಪ್ರೀಂ ಕೋರ್ಟ್

ಕುರುಡು ಕಾನೂನು ! ಇದು ನಮಗೆ ಎಷ್ಟೋ ವರ್ಷಗಳಿಂದ ವೇದ್ಯವಾಗಿತ್ತು.

7. ಮಾಸ್ಕೋದಲ್ಲಿ ಚೆರ್ನೆಂಕೋ ಅವರನ್ನು ಭೇಟಿ ಮಾಡುವುದಕ್ಕೆ ಜನರಲ್ ಜಿಯಾ ಅವರಿಗೆ ಹಕ್ಕಿಲ್ಲ ಎಂದು ರಷ್ಯನ್ ಅಧಿಕಾರಿಗಳು ನಿರ್ಧರಿಸಿದರಂತೆ !

8. 'ಕನ್ನಡ ಪ್ರೇಮದಿಂದ ಆಗಬಹುದಾದ ಹಾನಿ' ಎಂಬ ವರ್ಗದ ವಿವಾಖಾತೆ ತೆಗೆಯಬಹುದು ಎನ್ನುವುದು ಶುದ್ಧ ಕುಹಕ !

# ಸ್ಯಾಲಿ ಗಾರ್ಡ

—ಶೀನೂ

'ತುಮಕೂರಿನಿಂದ ಕೇವಲ ತೊಂಬತ್ತೈದು ಮೈಲಿ ಅಂತರದಲ್ಲಿರುವ ಸಾಲಾಪುರ ಶಾಖೆಗೆ ನಿನ್ನನ್ನು ಮೇನೇಜರನೆಂದು ಭಡ್ತಿ ನೀಡಿ ವರ್ಗಾಯಿಸಿದ್ದರಿಂದ ಆದಷ್ಟು ಬೇಗನೇ ಅಲ್ಲಿಗೆ ತೆರಳಿ ಅಲ್ಲಿನ "ಛಾರ್ಜ" ತೆಗೆದುಕೊಂಡು ಮುಂದಾಮೋಚಿಕೋ' ಎಂದು ನಮ್ಮ ಬ್ಯಾಂಕಿನ ಹೆಡ್ ಆಫೀಸಿನಿಂದ ಕಾಗದ ಬಂದಾಗ ನನಗೆ ಭಯಂಕರ ಸಂತೋಷ ಆತು

ಸರಿ ಠೇವಣಿಗಳೇ ಇಲ್ಲದ ಸಾಲಾಪೂರ ಶಾಖೆಗೆ ತೆರಳಿ ತಲೆ ತಪ್ಪಿಸಿ ತಿರುಗುತ್ತಿರುವ ಸಾಲಗಾರ ( ಬಡ!-) ಬೋರೇಗೌಡರನ್ನು ಹುಡುಕಲಾರಂಭಿಸಿದೆ. ಇಂತಹ ನೂರಾರು ಕೃಷಿ ಸಾಲಗಳನ್ನು ಮಂಜೂರು ಮಾಡಿದ್ದಕ್ಕೇ ಇಲ್ಲಿನ ಮೊದಲಿನ ಮೇನೇಜರರಿಗೆ ಪ್ರಮೋಷನ್ ಆಗಿ ಅವರು ಬೆಂಗಳೂರಿಗೆ ತೆರಳಿದ್ದರು. ಈಗ ಈ ಸಾಲಗಳನ್ನೆಲ್ಲ ವಸೂಲೀಕರಿಸುವ ಕಾರ್ಯ ನನ್ನ ಪಾಲಿಗೆ ಬಂದಿತ್ತು. ತಿರುಗಿ ತಿರುಗಿ ಸುಸ್ತು ಆಯ್ತು. ಕೊನೆಗೆ ಹೆಡ್ ಆಫೀಸಿಗೆ ಕರುಣೆ ಬರುವಂತೆ ಬರೆದುಕೊಂಡೆ.

"ಸಾಲವನು ಕೊಡುವಾಗ ಹುಲ್ಲೋಗರುಂಡಂತೆ
ಸಾಲಿಗನ ಹುಡುಕಿ ಹುಡುಕಿ ತಿರುಗುವಾಗ
ಕಿಬ್ಬದಿಯ ಕೀಲು ಮುರಿದಂತೆ... ...."

ಇತ್ಯಾದಿ ಇತ್ಯಾದಿಯಾಗಿ ಒರೆದು ಒಂದು ದ್ವಿಚಕ್ರಿಯನ್ನು ದಯಪಾಲಿಸಿದರೆ ಹಳ್ಳಿಗಾಡ್ಯ ರಸ್ತೆಗಳಲ್ಲಿ ತಿರುಗಲು ಅನುಕೂಲವೆಂದು ಒರೆದುಕೊಂಡೆ.

'ಆಗಲಿ ಒಂದು ಜಾವಾವನ್ನೋ ಬುಲೆಟ್ಟನ್ನೋ ಕೊಂಡುಕೊಂಡು ಮುಂದಾಮೋಚಿಕೋ' ಎಂದು ಅಪ್ಪಣೆಯಾಯ್ತು.

ಸರಿ. ಮೋಚಿಕೊಂಡೆ. ಜಾವಾ ಬಂದಮೇಲೆ ನನ್ನ ಜಾಯಾ ಗುಂಡಮ್ಮ (225 ಕೆ.ಜಿ.) ಕೂಡ ಆನಂದತುಂದಿಲಳಾದಳು. ಹೀಗಾಗಿ ಜಾಯಾ ಸಹಿತನಾಗಿ ಜಾವಾದ ಮೇಲೆ ಹಳ್ಳಿಗಾಡಿನಲ್ಲೂ ಪಕ್ಕದ ತಾಲ್ಲೂಕು ಸ್ಥಳವಾದ ತಿರುಕಸಂದ್ರಕ್ಕೂ ಹೋಗಿ ಬರಲಾರಂಭಿಸಿದೆ. ಜೀವನ ಎಷ್ಟೋ ಪಸಂದಾಗಿತ್ತು.

ಒಮ್ಮೆ ದ್ವಿಚಕ್ರಿಯ ಮೇಲೆ ಗುಂಡಮ್ಮ ಸಹಿತನಾಗಿ ಬರುತ್ತಿದ್ದಾಗ ಗುಂಡಮ್ಮ ಸ್ಯಾರೀ ಹಿಂದಿನ ಚಕ್ರದಲ್ಲಿ ಸಿಕ್ಕು ಜಾವಾದ ಚಲನೆಗೆ ಒಮ್ಮೆಲೇ ತಡೆಯುಂಟಾಗಿ ಜಾವಾ ಹಳ್ಳದಲ್ಲಿ ಬಿದ್ದು ; ಗುಂಡಮ್ಮ ಸಮತಟ್ಟಾದ ನೆಲದಲ್ಲಿ ಬಿದ್ದು ಅಲ್ಲಿ ಇನ್ನೊಂದು ಹಳ್ಳ ವಾಯಿತು.

ಮರುದಿನ ಜಾವಾ ರಿಪೇರಿಗೆ ಬಂದ ಜಾಫರುಲ್ಲಾ "ಔರತ ಲೋಗಾ ಪೀಛೇ ಬೈಠತೆ ತೋ ಏಕ್ ಸ್ಯಾರಿಗಾರ್ಡ ಲಗಾನ ಸಾಬ್" ಎಂದ. ದ್ವಿಚಕ್ರಿಯ ಹಿಂದಿನ ಚಕ್ರದ ಭಾಗ ವನ್ನು ಕಬ್ಬಿಣದ ಮುಚ್ಚಳದಿಂದ ಮುಚ್ಚಿಬಿಟ್ಟರೆ ಹಿಂದೆ ಕುಳಿತ ಮಹಿಳಾಮಣಿಗಳ ಸ್ಯಾರಿ ಗಾಳಿಗೆ ಹಾರಿ ಚಕ್ರದಲ್ಲಿ ಸಿಕ್ಕು ಆಗುವ ಅಪಘಾತವನ್ನು ತಪ್ಪಿಸುವದೆಂದೂ ಅದನ್ನು ಹಾಕಿಸಲೇಬೇಕೆಂದು ಗುಂಡಮ್ಮನ ಹಠ.

ಸರಿ ಮತ್ತೆ ಹೆಡ್ ಆಫೀಸಿಗೆ ಕಾಗದ ಬರೆದೆ.

'ಹೀಂಗ....ಹೀಂಗಹೀಂಗ....ಹೀಗಿಂದ ಹೀಂಗ ಆಗಿ ಯಡವಟ್ಟಾಗಿದೆ. ಅದಕ್ಕೆ ಒಂದು ಸ್ಯಾರಿಗಾರ್ಡ ತೊಗೊಳ್ಳೋಕೆ ಒಂದಿನ್ನೂರು ರೂಪಾಯಿ ಮಂಜೂರು ಮಾಡಿ' ಎಂದು.

ಒಡನೇ ಕಾಗದ ಬಂತು.

'ಕಚೇರಿಯ ವಾಹನವನ್ನು ಕಚೇರಿಯ ಕೆಲಸಕ್ಕೇ ಉಪಯೋಗಿಸಬೇಕು ಅಲ್ಲದೇ ಖಾಸಗೀ ಕೆಲಸಕ್ಕಲ್ಲ. ಆದ್ದರಿಂದ ಕಚೇರಿಯ ಕೆಲಸದ ಮೇಲಿದ್ದಾಗ ಹಿಂದಿನ ಸೀಟಿನಲ್ಲಿ ಹೆಂಡತಿ ಅಥವಾ ಇನ್ನಾವುದೇ ತರುಣಿ-ಯಾ-ಸೀರೆ ಸುತ್ತುವ ವ್ಯಕ್ತಿಯನ್ನು ಅದೇಕೆ ಕುಳ್ಳಿರಿಸ ಬೇಕೆಂದು ತಮಗೆ ಸೋಜಿಗವಾಗಿದೆಯೆಂದೂ ಅದಕ್ಕಾಗಿ ಸ್ಯಾರಿಗಾರ್ಡ ಕೊಳ್ಳಲು ಹಣ ಮಂಜೂರು ಮಾಡಲಾಗುವದಿಲ್ಲವೆಂದೂ —ಮತ್ತು ಈ ಸಾರಿ ಮುಂಡಾಮೋಚಿಕೊಳ್ಳ ವದು ಅವಶ್ಯವಿಲ್ಲೆಂದೂ ಬರೆದಿದ್ದರು.

ಕೆಲದಿನ ಬಿಟ್ಟು ಮತ್ತೆ ಕಾಗದ ಬರೆದೆ.

'ಹಿಂದಿನ ಸೀಟಿನಲ್ಲಿ ಕೇವಲ ಹೆಂಡತಿಯಲ್ಲದೇ ವ್ಹಿಲೇಜ ಪಂಚಾಯ್ತಿಯ ಮೆಂಬರರಾದ ಮಾದೇವಮ್ಮನವರೂ, ಉರ್ದು ಬಾಲಿಕಾಶಾಲೆಯ ಮುಖ್ಯಾಧ್ಯಾಪಿಕೆಯಾದ ಬುರ್ಖಾ ಧಾರಿಣಿ ಬುಡನ್‌ಬೀಯವರೂ ಆಗೀಗ ಕೂಡುತ್ತಾರೆಂದೂ ಮತ್ತು ಇವರಿಗೆಲ್ಲ ಈ ರೀತಿ ಸಹಾಯ ಮಾಡುವುದರಿಂದ ಸಾಲಾಪೂರದಲ್ಲಿ ಬ್ಯಾಂಕಿನ ಇಮೇಜ ಪ್ರಚಂಡವಾಗಿ ಬೆಳೆ ದಿದೆಯೆಂದೂ ಮತ್ತು ಇನ್ನು ಕೆಲವೇ ದಿನಗಳಲ್ಲಿ ಇವರೆಲ್ಲರ ಸಹಾಯದಿಂದ ಕೆಲವಾ ದರೂ ಠೇವಣಿಗಳು ದೊರೆಯಬಹುದೆಂದೂ ಅದಕ್ಕಾಗಿ 'ಸ್ಯಾರಿಗಾರ್ಡ' ಅವಶ್ಯವೆಂದೂ ಬರೆದೆ.

ಉತ್ತರ ಬಂತು.

'ಬ್ಯಾಂಕಿನ ಇಮೇಜ ಬೆಳೆಸಲು ಹಾಗೂ ದ್ವಿಚಕ್ರಿಯನ್ನು ಸಾಲಾಪೂರ ಗ್ರಾಮ ಜೀವನದ ಒಂದು ಅವಿಭಾಜ್ಯ ಅಂಗವಾಗಿ ಮಾಡುವಲ್ಲಿ ನಿಮ್ಮ ಪ್ರಯತ್ನ ಸ್ತುತ್ಯವೆಂದೂ ಆದರೂ ಬ್ಯಾಂಕಿನ ಅಭಿವೃದ್ಧಿಗೆ ದ್ವಿಚಕ್ರಿಯ ಸ್ಯಾರಿಗಾರ್ಡಿನ ಅವಶ್ಯಕತೆಯ ಬಗ್ಗೆ ತಮಗೆ ಇನ್ನೂ ಖಾತರಿಯಾಗಿಲ್ಲವೆಂದೂ ಅವಕ್ಕೋಸ್ಕರ ಮುಂಡಾಮೋಚಿಕೊಳ್ಳುವ ಕಾರಣವಿಲ್ಲೆಂದೂ ಹೇಳಿ ಅಷ್ಟಕ್ಕೇ ಬಿಡದೇ 'ಇನ್ನು ಮುಂದೆ ಸೀರೆಯುಟ್ಟ ಯಾವುದೇ ವ್ಯಕ್ತಿಯನ್ನು ಹಿಂದಿನ ಪೀಠದಲ್ಲಿ ಕುಳ್ಳಿರಿಸಿ ವಾಹನ ನಡೆಸಬಾರದೆಂದೂ ಒಂದು ವೇಳೆ ಹಾಗೆ ನಡೆಸಿದಲ್ಲಿ ಆದರಿಂದಾದ ಅಪಘಾತ ಅನಾಹುತಗಳಿಗೆ ನಾನೇ ಪೂರ್ಣ ಜವಾಬುದಾರನೆಂದೂ' ತಿಳಿಸಿದ್ದರು.

ಈ ಪತ್ರವನ್ನು ಓದಿ ಗುಂಡಮ್ಮ ಕಿಡಿಕಿಡಿಯಾದಳು. "ಇದೇನ್ರೀ ಸೀರೀನೇ ಇಲ್ಲದೇ ಅಥವಾ ಮುದ್ದಮ್ಮನ ಹಂಗ ಲಂಗ ಸುತಿಗೋಡು ಕೂಡಂತಾರೇನು ನಿಮ್ಮ ಬ್ಯಾಂಕಿನವರು" ಎಂದಳು.

ಕೆಲವು ದಿನ ಕಳೆಯಿತು. ಇನ್ನೊಬ್ಬ ಬಡ ಬೋರೇಗೌಡ ಬ್ಯಾಂಕಿಗೆ ಬಂದ ಸಾಲ ಕೇಳಲು ತನ್ನ ಜಮೀನಿಗೆ ಬಂದು ಪರಾಲಂಬಿಸಿ ಸಾಲದ ವ್ಯವಸ್ಥೆ ಮಾಡಬೇಕೆಂದು ಕೇಳಿದ.

'ಸರಿ ಬಾಪ್ಪಾ, ದ್ವಿಚಕ್ರಿಯ ಹಿಂದಿನ ಪೀಠದಲ್ಲಿ ಕೂತ್ಕೋ' ಎಂದೆ. ಅವನೂ ಬಂದ! ಅವನು ಬಂದದ್ದೇ ಬಂದದ್ದು !! ನಾನು ನೋಡಿದ್ದೇ ನೋಡಿದ್ದು !!! "ಯುರೇಕಾ...." ಎಂದು ಕಿರುಚುತ್ತಾ ಜಾಪಾವನ್ನು ಅಲ್ಲೇಬಿಟ್ಟು ಬ್ಯಾಂಕಿನ ಒಳಗಡೆ ಓಡಿ ಹೆಡ್ಡರ ಆಫೀಸಿಗೆ ಒಮ್ಮೆಲೇ ಕಾಗದ ಬರೆದೆ.

'ಮಾನ್ಯರೇ ನಮ್ಮ ಸಾಲಾಪೂರ ಶಾಖೆ ತಮಗೇ ತಿಳಿದಂತೆ ತುಮಕೂರಿನಿಂದ ಕೇವಲ ತೊಂಭತ್ತೈದು ಮೈಲಿಗಳ ಅಂತರದಲ್ಲಿ ಹುಬ್ಬಳ್ಳಿಯ ಹತ್ತಿರವಿದೆ. ಇಲ್ಲಿಯ ರೈತರು ನಮ್ಮವರಂತೆ ಪಟ್ಟೆಯ ಚಡ್ಡಿಯನ್ನೋ ಅಥವಾ ದಟ್ಟಿಯನ್ನೋ ಸುತ್ತದೇ ಕಚ್ಚಾಕಟ್ಟಿ ಧೋತರ ಉಡುತ್ತಾರೆ. ವಾರಕ್ಕೆ ಸರಾಸರಿ ಏಳೆಂಟು ಜನ ಇಂತಹ ರೈತರನ್ನು ನಾನು ಹಿಂದಿನ ಸೀಟಿನಲ್ಲಿ ಕೂಡ್ರಿಸಿಕೊಂಡು ಅವರ ಗದ್ದೆಗಳಿಗೆ ಕಾರ್ಯನಿಮಿತ್ತ ಹೋಗಬೇಕಾಗುತ್ತದೆ ಮತ್ತು ಹೀಗೆ ಪ್ರಯಾಣಿಸುವಾಗ ಅವರ ಧೋತರಗಳು ಹಿಂದಿನ ಚಕ್ರದಲ್ಲಿ ಸಿಲುಕಿ ಅಪಘಾತಗಳಾಗುವ ಸಂಭವಗಳಿವೆ. ಹೀಗಾದ ಪಕ್ಷದಲ್ಲಿ ಬ್ಯಾಂಕಿನ ಇಮೇಜ ಪೂರ್ತಿ ಹಾಳಾಗುವುದೆಂದು ತಿಳಿಸಿ ಸಾಲಾಪೂರ ಶಾಖೆಯ ಅಭಿವೃದ್ಧಿಗೆ ಆದರಿಂದ ಆತಂಕವುಂಟೆಂದು ಅರುಹಿದೆ. ಅಲ್ಲದೆ 'ಹಳ್ಳಿಯ ರೈತರೆಲ್ಲ ವಿಶೇಷವಾಗಿ ಸರಪಂಚರಾದ ಶಿವನಂಜಪ್ಪನವರು ಹಿಂದಿನ ಚಕ್ರಕ್ಕೆ ಒಂದು "ಧೋತಿಗಾರ್ಡ"

ಹಾಕಿಸಲೇಬೇಕೆಂದು ಆಗ್ರಹ ಪಡಿಸುತ್ತಿದ್ದಾರೆಂದೂ ಮತ್ತು ಆ ರೀತಿ 'ಥೋತಿಗಾರ್ಡ' ಹಾಕಿಸಿದರೆ ತಲಾ 5 ರೂಪಾಯಿನ ಸೇವಿಂಗ ಖಾತೆಗಳನ್ನು ತೆರೆಯಲು 5 ಜನ ಗ್ರಾಮ ಪ್ರಮುಖರು ಮುಂದೆ ಬಂದಿದ್ದಾರೆಂದೂ ಆದ್ದರಿಂದ "ಥೋತಿಗಾರ್ಡ" ಕೊಳ್ಳಲು ಒಂದಿನ್ನೂರು ರೂಪಾಯಿಗಳನ್ನು ಕೂಡಲೇ ಮಂಜೂರ ಮಾಡಬೇಕೆಂದು ಬರೆದೆ.

ಅಲ್ಲಿಂದ ಕೂಡಲೇ ಮರುಕಾಗದ ಬಂತು.

'ನಿಮ್ಮ ಓಲೆಯ ವಿಷಯವನ್ನು ಮರುವಿಮರ್ಶಿಸಿ "ಥೋತಿಗಾರ್ಡಿ"ನಿಂದಾಗುವ ಬ್ಯಾಂಕಿನ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ಒಂದು ಥೋತಿಗಾರ್ಡನ್ನು ರೂ. 200ಕ್ಕೆ ಮೀರದಂತೆ ಮಂಜೂರ ಮಾಡಲಾಗಿದೆ. ಈಗ ಮುಂದಾಮೋಚಿಕೊಳ್ಳಿರಿ"

ಸರಿ ನಾನು ಕೂಡಲೇ ಹುಬ್ಬಳ್ಳಿಗೆ ಹೋಗಿ ಮೆಸರ್ಸ್ ಟೆಂಗಿನಕಾಯಿ ಆ್ಯಂಡ ಅಂಬಿ ಹಣ್ಣನವರ ಆ್ಯಂಡ ಕಂಪನಿಯಲ್ಲಿ ಒಂದು ಸ್ಟ್ಯಾರಿಗಾರ್ಡ ಕೊಂಡುಕೊಂಡು ಅದರ ಹಣದ ಬಗ್ಗೆ ಪಾವತೀ ಹಾಗೂ ಇನ್‌ವಾಯಿಸಗಳಲ್ಲಿ "ಥೋತಿಗಾರ್ಡ" ಎಂದು ನಮೂದಿಸಿ ಕೊಂಡು ಬಂದೆ.

ಗುಂಡಮ್ಮನಿಗೆ ಅಗದೀ ಆನಂದ ಆತು. ನಾವಿಬ್ಬರೂ ಅಂದೇ 'ತಿರುಕಸಂದ್ರ' ದಲ್ಲಿದ್ದ ಭ. ಶಂ. ಟೂ. ಟಾ. (ಭವಾನೀ ಶಂಕರ ಟೂರಿಂಗ ಟಾಕೀಸ)ದಲ್ಲಿ ನಡೆಯು ತ್ತಿದ್ದ—ರಾಜರರಾಜ, ರಸಿಕರ ರಾಜ, ಮುಕ್ಕೋಟಿ ಕನ್ನಡಿಗರ ಕಣ್ಮಣಿ, ಪದ್ಮಭೂಷಣ, ನಟಸಾರ್ವಭೌಮ, ಡಾ. ರಾಜಕುಮಾರ್‌ರವರುಗಳು ನಟಿಸಿರುವ "ಬಡವರ ಬಂಧು" ಚಿತ್ರ, ನೋಡಿ ಬಂದವು.

• • •

ಮುಂದೆ ಸಾಲಾಪುರದಲ್ಲಿ ನಾನು ಸಾಲ ವಸೂಲಿಯನ್ನು ಬಿಟ್ಟು ಇನ್ನಷ್ಟು ಹೊಸ ಸಾಲಗಳನ್ನು ಕೊಡುತ್ತಾ ನಡೆದೆ.

ಈಗ ನನಗೂ ಪ್ರಮೋಷನ್ ಆಗಿದೆ. ಜಾವಾ ಹೋಗಿ ಪದ್ಮಿನಿ ಬಂದಿದ್ದಾಳೆ, ಕಾರನಲ್ಲಿ ತಿರುಗಿಕೊಳ್ಳಲೇಬೇಕೆಂದು ಹಠಹಿಡಿದು ಗುಂಡಮ್ಮ 'ಡಾಯಿಟ' ನಡಯಿ ಸಿದ್ದಾಳೆ.

—ಶುಭಾಶಯಗಳೊಂದಿಗೆ



# ಗುರುವಾರ ಬಂತಮ್ಮ

—ದಾಶರಥಿ ದೀಕ್ಷಿತ್

ಬೆಚ್ಚಗೆ ಸ್ವೆಟರ್ ತಲೆಗೆ ಕೋತಿ ಟೋಪಿ ಮೇಲೆ ಉಣ್ಣೆ ಮಫ್ಲರ್ ಹಾಕಿ ವಾಕಿಂಗ್ ಹೊರಟಾಗ ಬೆಳಿಗ್ಗೆ 6-30 ಘಂಟೆ. ಗೇಟ್ ಬಾಗಿಲು ಡಣಕ್ ಅನ್ನಿಸಿ ತೆಗೆದೆ.

"ಬಹಳ ದೂರ ಹೋಗಬೇಡಿ" - ಅರ್ಧಾಂಗಿ ಉವಾಚ.

"ಇಲ್ಲಿ ವಾಕಿಂಗ್ ಆಯ್ತು, ಒಳಗೆ ಬಂದು ಬಿಡ್ತೀನಿ..."

"ಏನು ಕೋಪವಪ್ಪ "

"ಅಲ್ಲಾ ಇವತ್ತು ಗುರುವಾರ ರಾಯರ ಗುಡಿ ತನಕ ಹೋಗಿ ಬರೋಣಾಂತ..."

"ರಾಯರ ಗುಡಿತನಕ ನಡಿಯೋಕಾಗತ್ತ್ಯೆ? ... ಮೊನ್ನೆ ತಾನೆ ಜ್ವರ ಆರಿದೆ..."

"ಡಾಕ್ಟ್ರು ಹೇಳಿದರಲ್ಲ ನಿನ್ನೆ - ವಾಕಿಂಗ್ ಹೋಗಿ ಪರವಾಗಿಲ್ಲ ಅಂತ ..."

"ಹೌದಲ್ಲವೆ - ನಿಧಾನವಾಗಿ ಹೋಗಿ - ಜಲ್ಲಿ ಲಾರಿ, ಮರಳುಲಾರಿ, ಬಿಟಿಎಸ್ಸು ಆಟೋ - ಸ್ಕೂಟರು, ಮೋಟಾರು ಬೈಕು - ಟೆಂಪೋ ...ಎಲ್ಲಾ ಫುಟ್‌ಪಾತ್ ಮೇಲೆ ಓಡಾಡ್ತಿರುತ್ತೆ ಹೋಗಬೇಡಿ ರಸ್ತೇಲಿ ಹೋಗಿ ಹುಷಾರು - ಹುಷಾರು ... ಹಾಗೆ ಮುಂದಿನ ಗುರುವಾರ ಮಾವನವರ ತಿಥಿಗೂ ಬುಕ್‌ಮಾಡಿ ಬನ್ನಿ..."

—ಎಂದು ನಾನೆಲ್ಲಿ ಘೋರವಾದ ಅಪಮೃತ್ಯುವಿಗೆ ನಕ್ಕ ತನ್ನ ಕುಂಕುಮಭಾಗ್ಯ ಹೋದೀತೋ ಎಂದು ಎಚ್ಚರ ಹೇಳಿಕಳಿಸಿದಳು. ನನಗೇನೂ ಆಗಿಲ್ಲ, ಸುಮ್ಮನೆ ಈ ಹೆಂಡ್ತಿಗಳು ಹೆದರಿಸುತ್ತವೆ.

ಈಚೆಗೆ ರಾಯರ ಮಠಗಳು ವಿಪರೀತವಾಗಿವೆ. ಜನಸಂಖ್ಯೆ ಬೆಂಗಳೂರಿನ ಬೆಳವಣಿಗೆಗೆ ತಕ್ಕಂತೆ ಎಲ್ಲಾ ಕಡೆ ಮಠಗಳೂ – ಮಸೀದಿಗಳೂ - ಚರ್ಚುಗಳೂ - ಏಳಬೇಡವೇ! "ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ..." ಅಂತ ಹೇಳಿಲ್ಲವೆ? ಆ ಸ್ವಾಮಿಯೇ ಭಕ್ತರಿಗೆ ಪ್ರೇರಣೆ ಮಾಡಿ ಆದಷ್ಟು ಹೆಚ್ಚು ರಾಘವೇಂದ್ರ ಸ್ವಾಮಿಗಳ ವೃಂದಾವನಗಳು ಬೆಳೆದು ಬರುತ್ತಿವೆ. ಸ್ವಾಮಿ, ರಾಯರ ರೂಪದಲ್ಲಿ ಕಾಣ್ತಾ ಇದ್ದಾನೆ.

ಇದೇ ರೀತಿ ನಮ್ಮ ಮೊಹಲ್ಲಾದಲ್ಲಿ ಎರಡು ಮಠಗಳಾಗಿವೆ - ಆಗಬೇಕಾದ್ದೆ, ಧರ್ಮ ನಾಶವಾಗಿ ನಾಸ್ತಿಕರು ಹೆಚ್ತಾ ಇರೋ ಈ ಕಾಲದಲ್ಲಿ ಸೊಗಸಾಗಿ ಊಟ

ಹಾಕೋ ಮಠಗಳು -ಶ್ರಾದ್ಧಾದಿ ಕರ್ಮಗಳಿಂದ ಹಿಡಿದು ಚೌಲಾದಿ ಕಾರ್ಯಗಳವರೆಗೆ ರಾಯರ ಸನ್ನಿಧಿಯಲ್ಲಿ ಮಾಡಿಕೊಡೊ ಮಠಗಳು ಬೇಕು. ಈ ಅವಸರದ ಮನೆಯಲ್ಲಿ ಅನುಕೂಲವಿಲ್ಲದ ದಿನಗಳಲ್ಲಿ ಇವು ಅತ್ಯಗತ್ಯ.

ಈ ರೀತಿಯ ವಿಚಾರಧಾರೆಯಲ್ಲಿ ಮನಸ್ಸು ಮಗ್ನವಾಗಿ ಹಾದಿ ಸಾಗಿದಾಗ ಫುಟ್‌ಪಾತ್ ಮೇಲೆ ಹೋಗ್ರೀ' ಎಂದು ಇಬ್ಬರು ಲಾರಿಯವರು ನಾಲ್ವರು ಸ್ಕೂಟರರ ಐವರು ಆಟೋದಾರರೂ ಬೈದು ಗದರಿಸಿದ್ದರು. ಮನೆಯಾಕೆ ರಸ್ತೇಲಿ ಹೋಗಿ ಅಂತಾಳೆ. ಇವರುಗಳು ಬೈತಾರೆ.... ನಾನೆಲ್ಲಿ ಅಂತರಿಕ್ಷವಲ್ಲಿ ಸಿನಿಮಾದ ನಾರದನ ಹಾಗೆ "ಎಂಥಾ ಲೋಕವಯ್ಯಾ....' ಅಂತ ಹಾಡ್ತಾ ಹೋಗಲೆ? . ....

ಈ ಎಲ್ಲರನ್ನೂ ಸಹಿಸಿಕೊಂಡು ರಾಯರ ಗುಡಿ ಬಾಗಿಲು ಸೇರಿದೆ ವೃಂದಾವನ ಅಲಂಕೃತವಾಗಿ ಶೋಭಿಸುತ್ತಿತ್ತು. ಅದು ಧನುರ್ಮಾಸ ಆದ್ದರಿಂದ ಬೆಳಗಿನ ಜಾವ ಪೂಜೆ- ಊಟ ಆಗಬೇಕು. ಭಕ್ತಾದಿಗಳೆಲ್ಲಾ ಹಸ್ತೋದಕ ಹಾಕಿ (ಐದು ರೂ. ಮಾತ್ರ) ಊಟ ಮುಗಿಸಿ ಕೈ ತೊಳೆಯುತ್ತಿದ್ದರು

ಮಹಾತ್ಮರ ವೃಂದಾವನದ ಸುತ್ತ ಮೂರು ಸುತ್ತು ಸುತ್ತಿ ತೀರ್ಥ ಮಂತ್ರಾಕ್ಷತೆ ತೆಗೆದುಕೊಂಡು ಯಾರೋ ಮಾಡಿಸಿದ ಮಂಗಳಾರತಿಗೆ ನಾನೂ ಕೈಬಿಸಿ ಮಾಡಿಕೊಂಡು 25 ಪೈಸೆ ಆರತಿ ತಟ್ಟೆಗೆ ಹಾಕಿ ಹೊರ ಹೊರಟೆ ಇನ್ನೇನು ಸನ್ನಿಧಿ ಸ್ಥಾನ ಬಿಡಬೇಕು ಅನ್ನೋದರಲ್ಲಿ ಬಲಕ್ಕೆ ತಿರುಗಿದೆ 'ಆಫೀಸು' ಆಜಾನುಬಾಹು ವಯಸ್ಸಾದ ಪಗಡದಸ್ತಾದ ಆಸಾಮಿ ಅಂಗಾರ ಅಕ್ಷತೆ ಮುದ್ರೆನಾಮಗಳಿಂದ ಶೋಭಿಸುತ್ತಾ ಆಸ್ಥಾನದಲ್ಲಿ ಮಂತ್ರಿಗಳು ರಾಜನಿಲ್ಲದಾಗ ಕೂಡುವಂತೆ ಕೂತಿದ್ದರು. ಆಗತಾನೆ ಧನುರ್ಮಾಸದ ಸ್ಪೆಶಲ್ ಊಟ ಮುಗಿಸಿದ ಶ್ರೀಯುತರನ್ನ ಮಾತಾಡಿಸಿಕೊಂಡು ಹೋಗೋಣವೆಂದು ಆಫೀಸ್‌ಗೆ ಹೋದೆ. "ಬರ್ರೀ ಬರ್ರಿ ಬರ್ರಿ" - ಎಂದು ಹಲ್ಲಿಲ್ಲದ ಬಾಯಿಂದ ನಗುತ್ತಾ ಸ್ವಾಗತಿಸುತ್ತಾ ಬಾಯಲ್ಲಿನ ಅಡಿಕೆ ಕರಗಿಸುತ್ತಿದ್ದರು.

ನಾನು ಯಾರು ಅನ್ನೋದು ಬಹುಶಃ ಅವರಿಗೆ ತಿಳಿದಿದೆ ಅಂತ ನನ್ನ ಊಹೆ. ಆದರೂ ಮಠದ ಕೆಲಸದಲ್ಲಿ ಮರೆತಿದ್ದಾರೆಂದು ನಾನ್ಯಾರನ್ನೋದನ್ನ ತಿಳಿಸಲು

"ನಮಸ್ಕಾರ ಆಚಾರ್ರೆ ತಿಳೀತಲ್ಲ ....ನಾನೂ..."

"ಹಹ... ತಿಳೀತು ಬಿಡ್ರಿ" ತಿಳಿದವರಿಗಿಂತ ಹೆಚ್ಚು ನಕ್ಕರು.

"ದೊಡ್ಡ ಮಾತು.... ತಿಳೀತಲ್ಲ.... ಆ ....ಕೇಶವಮೂರ್ತೀ.... ಇದ್ದಾನಲ್ಲಾ ಅವರ ಅಪ್ಪಾ"

"ಹೌದರೀ .... ಪಾಪ ಹಿಂಗಾಗಬಾರದಾಗಿತ್ತು.... ಆಯುಸ್ಸು ಯಾರ ಕೈಯಾಗಿದೂ.... ರಾಯರು ಬಾ ಅಂದರೆ ಹೋಗೋದಷ್ಟೆ ನಮ್ಮ ಕೆಲಸ...."

"ಅಲ್ಲ ಆಚಾರ್‍ರೇ ಮತ್ತೇ...."

"ಮತ್ತೇನು ಬಂತಪ್ಪಾ... ಮನುಷ್ಯ ಭಾಳ ಒಳ್ಳೇನು ಸ್ವಲ್ಪ ದುರಹಂಕಾರಿ — ಅಷ್ಟೆ ... ಜಿಪುಣ ಆದರೂ ಒಳ್ಳೆಯವ...."

"ಆಚಾರ್‍ರೇ ನನ್ನ ಮಾತಾದ್ರೂ ಪೂರ್ತಿ ಕೇಳ್ರೀ..."

"ಪೂರ್ತಿ ಕೇಳಿದರೂ ಅಷ್ಟೇ– ಅರ್ಧ ಕೇಳಿದರೂ ಅಷ್ಟೆ - ಯಮರಾಜ ಕರದಾಂದ್ರೆ ತೀರ್‍ತು.... ಅವ ಮಾಡ್ತಿರೋ ರಾಯರ ಸೇವಕ್ಕೇ... ಸ್ವರ್ಗಕ್ಕೆ ಹೋಗ್ತಾನೆ ಬಿಡ್ರಿ .."

"ನಾನು ಹೇಳೋದು ಏನೂಂದ್ರೇ..."

"ಏನೂ ಅಂಬೋದು ನನಗೆ ಗೊತ್ತದ – ಎಷ್ಟನೆ ದಿನದಿಂದ ಕರ್ಮಾದಿಗಳನ್ನು ಮಾಡಸ್ತಾರಂತೇ ... ನಮ್ಮಿಂದ ಏನು ಆಗಬೇಕೋ ಹೇಳಿಬಿಡ್ಲಿ ಅವರ ಅಪರ ಕರ್ಮ ಹೂವಿನ ಸರ ಎತ್ತಿದಾಂಗೆ ಮಾಡಿಕೊಡೋದು ನನ್ನ ಕೆಲಸ ... ಆತು ಬಿಡ್ರಿ– —ಈ ರಾಯರ ಸನ್ನಿಧಿ ಇರೋದೇ ಇಂಥಾ ಸಮಯದಾಗೆ ನೆರವಾಗಲಿಕ್ಕೆ ... ಶ್ರೀಗುರೂ... ರಾಘವೇಂದ್ರಾ ... ಒಂದು ಥರದಾಗೆ ಅವ ಸತ್ತಿದ್ದೆ ಸರಿ... ಅಲ್ರೀ... ಮನ್ನಾಗೆ ಥೂ ಥೂ ... ಅದೇನು ಕಿಲುಬು ತೇಗೀರಿ... ಈಗ ಹೋದ್ನಲ್ಲ ರೊಕ್ಕ ತೊಗೊಂಡು ಹೋದ್ನೇನು?....ಒಂದೇ ಮಾತ್ನಲ್ಲಿ ಹೇಳೋದೂಂದ್ರೆ ಅವ ಚಂಡಾಲ... ಪಾಪಿ ಆದ್ರೂ ರಾಯರು ಅವಗೆ ಸ್ವರ್ಗ ಕೊಡ್ಲಿ ... ಹೋದವರನ್ನ ನಾವು ಆಡ್ಕೋ ಬಾರದು...'ಭಜತಾಂ ಕಲ್ಪವೃಕ್ಷಃ ನಮತಾಂ ಕಾಮಧೇನುವೇ'-" ಆಳವಾಗಿ ಆಕಳಿಸಿದರು.

ಅಲ್ರೀ ಆಚಾರ್‍ರೇ .... ನನ್ನ ಮಾತರ ಕೇಳ್ರೀ ... "

ಕೇಳಿದ್ನಲ್ಲಪ್ಪಾ ... "

ಕೇಶವಮೂರ್ತಿ ಇದ್ದಾನಲ್ಲಾ ನಿಮ್ಮ ಮಠದ ಪರಮ ಭಕ್ತ .... ಅವರಪ್ಪ..."

"ಅವರಪ್ಪಾದ್ರೆ ಸಾಯಬಾರದೇನೋ .... ಆಯುಸ್ಸು ಮುಗಿದ ಮೇಲೆ ಮುಗೀತು ..."

"ಅವರಪ್ಪ 'ನಾನೇನ್ರೀ' ... ಅಂತ ಹೇಳ್ಲಿಕ್ಕಾದ್ರೂ ಬಿಡಿ ... ನಿಮಗೇ ಮುಂದಿನ ಗುರುವಾರ ...."

"ನೀವಾದ್ರೇನು ನಾನಾದ್ರೇನಪಾ ಸಾವು ಸಾವೇ .... ನಾನೇ ನಿಂತು ಶ್ರಾದ್ಧಾದಿ ಕರ್ಮಗಳನ್ನ ಮಾಡಸ್ತೀನಿ ... ಬಿಡು"

"ರೀ ನನ್ನ ಮಾತು ಪೂರ ಕೇಳ್ರೀ ... ಗಡದ್ದಾಗಿ ಧನುರ್ಮಾಸದ ಹೆಸರೊಳಗೆ ಸಜ್ಜಿಗೆ - ಹಯಗ್ರೀವ ಅಂಬಡೆ ಹೊಡೆದು ನನಗೆ ಮಾತೇ ಆಡ್ಲಿಕ್ಕೆ ಪುರಸೊತ್ತು ಕೊಡದೆ ,.., ಆ ಕೇಶವಮೂರ್ತಿ ತಂದೇನ ಸಾಯಿಸ್ತಾ ಇದೀರಲ್ರೀ ... "

"ನೀನೇ ಅಂದ್ಕಲ್ಲೋ ಹಾಗಂತಾ..."

"ನಾನೇ ಕೇಶವಮೂರ್ತಿ ಅಪ್ಪ ಕಣ್ರೀ ಅಂತ ಸ್ವಯಂ ನಿಮಗೆ ಜ್ಞಾಪಿಸಿ ಕೊಡೋದ್ರೊಳಗೇ ಎಲ್ಲಾ ಮಾತು ನೀವೇ ಆಡ್ತೀರಿ ... ಮುಂದಿನ ಗುರುವಾರ ನಮ್ಮ ತಂದೆ ಶ್ರಾದ್ಧ ... ಅವಕ್ಕೆ ಈಗಲೇ ಹೇಳಿ ಬುಕ್ ಮಾಡೋಣಾಂತ ಬಂದ್ರೀ"

"ಆಯ್ತು ನಿಮ್ಮಪ್ಪಂದೂ ಮಾಡ್ಕೊಳ್ಳೋಣ ... ನಿಂದೂ ಮಾಡ್ಕೊಳ್ಳೋಣಾ ... ಈ ರಾಯರ ಸನ್ನಿಧಿ ಇರೋದೇ ನಿಮ್ಮಂಥ ಭಕ್ತರಿಗೆ ... ಆ ಕೌಂಟರಿನೊಳಗೆ ನಿಂದು ನಿಮ್ಮಪ್ಪಂದು ಹೆಸರು ಬರ್ಸಿ ಅದೆಷ್ಟೋ ರೊಕ್ಕ ಕೊಟ್ಟು ಹೋಗು ... ಆತು ಮಾಡ್ಕೊಳ್ಳೋಣ ... ನಮಸ್ಕಾರ ನಡಿ "

—ಆಡಳಿತ ಮುಖ್ಯಸ್ಥರು ಹಾಗೇ ಒರಗಿ ಮಲಗಿದರು, ಹೊಟ್ಟೆ ಭಾರ ಪಾಪ ನಾನು ಹೊರಬರುವಾಗ ಗುರುಗಳಿಗೆ ನಮಸ್ಕಾರ ಮಾಡಿ ... ಗುರುವೇ ಎಂಥಾ ವ್ಯವಸ್ಥಾ ಇಟ್ಟೀರಿ ನಿಮ್ಮ ಸಿಬ್ಬಂದಿ ಒಳಗೆ ... ಜ್ಯಾಗ ಆ ಮ್ಯಾನೇಜರನ್ನ ನಿನ್ನ ಹತ್ರ ಕರ್ಕೊಪ್ಪಾ ಅಂತ ಹಾಳು ಮಠದ ಇನ್ನೊಂದು ಬ್ರಾಂಚಿನಲ್ಲಿ ನಮ್ಮ ತಂದೆಯ ಶ್ರಾದ್ಧದ ಖಾತೆ ತೆಗೆದು ಮನೆ ಸೇರಿದೆ.



" ಎಂಜಿನ್ ಜಪಾನಿಂದ ಬಂದ್ರೆ ಕಾರು ತಯಾರಾದ್ಹಾಗೇ ಸಾರ್"

# ಅನರ್ಥಕೋಶ

—ಆನಂದ್

| | | |
|---|---|---|
| ಕಪಿಲವಸ್ತು | — | ಕ್ರಿಕೆಟ್ ಚೆಂಡು |
| ಕುರುಕ್ಷೇತ್ರ | — | ಸರ್ಜಿಕಲ್ ವಾರ್ಡ್ |
| ದನಸ್ಪತಿ | — | *Beef* Tallow ಚರಬಿ |
| ಮಾಮೂಲು | — | ಸರ್ಕಾರಿ ಯಂತ್ರ ತೈಲ |
| ಧನಂಜಯ | — | ಲಾಟರಿ ಗೆದ್ದವ |
| ಲಕ್ಷಾಂತರ | — | ರಾಜಕೀಯ ಪಕ್ಷಗಳ ನಡುವಿನ ಅಂತರ |
| ಪಕ್ಷಾಂತರ | — | 'ಲಕ್ಷಾಂತರ' ನೋಡಿ |
| ರಜಕಾರ | — | ಬಂಧ್ ಮಾಡಿಸುವವನು |
| ಧರಣಿಮಂಡಲ | — | ವಿಧಾನಸೌಧದ ಮುಂದಿನ ಸರ್ಕಲ್ |

---

## 'ರಕ್ಷ್ಯ'ಮಾಂ ಪಾಣಿನಿ

'ಅಕ್ಷಯ' ಕಿರುವುದು ಒಂದೇ ಪ್ರಾಸ
'ಭಕ್ಷಯ' ಆದರೆ ಅದು ಬಲಂ ಪ್ರಾಸ
'ಭಕ್ಷ್ಯ'ವ ಲಕ್ಷ್ಯದಲಿಟ್ಟರೆ ಮಾವ
'ಅಕ್ಷ್ಯ'ವು ಶಿಕ್ಷ್ಯವೆ ಪಾಣಿನಿದೇವ

—ಕುಮಾರ್

# ವ್ಯವಹಾರ ಸೂತ್ರಗಳು
( ಗೆಲುವಿಗೆ ಹೆದ್ದಾರಿ )

—ಆರ್. ಎಸ್. ನಾಗಭೂಷಣ್

( ಮುಗಿಲುಹಳ್ಳಿ ಇನ್‌ಸ್ಟಿಟ್ಯೂಟ್ ಆಫ್ ಬಿಸಿನೆಸ್ ಮ್ಯಾನೇಜ್‌ಮೆಂಟಿನ, ರಾಷ್ಟ್ರೀಯ ಖ್ಯಾತಿಯ ಪ್ರೊ. ಆರ್. ಎಸ್. ಎನ್. ಭೂಷಣ್ ಅವರ ವ್ಯವಹಾರದ ಯಶಸ್ಸಿನ ಸೂತ್ರಗಳು ಲೋಕ ಪ್ರಸಿದ್ಧವಾಗಿವೆ. ಅಪರೂಪಕ್ಕಾಗಿ ಅವರು ಪ್ರಥಮ ಬಾರಿ ಕನ್ನಡದಲ್ಲಿ ಈ ಸೂತ್ರಗಳನ್ನು ಪ್ರಕಟಿಸುತ್ತಿದ್ದಾರೆ. ಅವರಿಗೆ ಮುಗಿಲುಹಳ್ಳಿ ಮಲ್ಲಪ್ಪನವರ ಪರ್ಸನಲ್ ಅಸಿಸ್ಟೆಂಟಾಗಿ ಕೆಲಸ ಮಾಡುತ್ತಿದ್ದ ರಾಯ ಭಾಷೆಯ ನೆರವನ್ನು ಕೊಟ್ಟಿದ್ದಾನೆ. ಯಾಗಾದಿಯ ಕೊಡುಗೆಯಾಗಿ ಕನ್ನಡಿಗರು ಸ್ವೀಕರಿಸಿ ಗೆಲುವಿನತ್ತ ದಾಪುಗಾಲನ್ನಿಡಲೆಂಬುದು ನಮ್ಮ ಹಾರೈಕೆ )

೧- ಅಪರಿಹಾರ್ಯ ಸಮಸ್ಯೆಗೆ ಅಪಹಾರವೇ ಪರಿಹಾರ.
ವಿವರಣೆ: (ಅ) ಕೆಟ್ಟ ಕವನ (ಆ) ಹೊಲಸು ಕಾದಂಬರಿ (ಇ) ಗಬ್ಬು ಸಿನಿಮಾಕ್ಕೆ ಕಾಂಪ್ಲಿಮೆಂಟರಿ ಟಿಕೆಟ್ಟು ನಿಮಗೆ ಮುಫತ್ ಸಿಕ್ಕಿವೆ. ಹಿಂಸೆ ಅನುಭವಿಸಲೇಬೇಕಿಲ್ಲ. ಕವನ ಕಾದಂಬರಿ ಮೂಲೆಗೆಸೆಯಿರಿ. ಸಿನಿಮಾ ಟಿಕೆಟ್ ಮಾರಿಬಿಡಿ.

ನಿಮ್ಮ ಕಾರ್ಖಾನೆಯಲ್ಲಿ ಸೈಕಲ್ ಸ್ಟ್ಯಾಂಡ್ ಬೇಕೇಬೇಕೆಂದು ಕಾರ್ಮಿಕರು ಪಟ ತೊಟ್ಟರೆ ಹೀಗೆ ಮಾಡಿ. 12.65 ಲಕ್ಷ ಸಾಲಕ್ಕೆ ಬ್ಯಾಂಕನ್ನು ಬೇಡಿಕೊಳ್ಳಿ. ಬಂಧುಗಳೇ ನಿಮಗೆಲ್ಲಾ ಮೊಪೆಡ್ ಕೊಡಿಸಲು ಈ ಕಂಪನಿ ಎಂಥಾ ರಿಸ್ಕು ತೆಗೆದುಕೊಳ್ಳುತ್ತಿದೆ ಬಲ್ಲಿರಾ ಎಂದು ಕೇಳಿ. ಸೈಕಲ್ ಸ್ಟ್ಯಾಂಡ್ ಗೋವಿಂದ !

೨- ಸಿಂಹದ ಗುಹೆಯಲ್ಲಿ ನಿಮ್ಮ ಪ್ರಾಣಕ್ಕೆ ನೀವೇ ಹೊಣೆ.
ವಿವರಣೆ : ಹೊರಗೆ ಸ್ನೇಹಿತರು ಸಹೋದ್ಯೋಗಿಗಳ ಬಳಿ ನಿಮ್ಮ ಪ್ರಭಾವ, ಅಥವಾ ಪ್ರಾಮುಖ್ಯತೆಯ ಬಗೆಗೆ ಏನು ಬೇಕಿದ್ದರೂ ಜಂಬ ಕೊಚ್ಚಬಹುದು. ಆದರೆ ನಿಮ್ಮ ಜುಟ್ಟು ಬಾಸ್ ಬಳಿಯಿದೆ. ಮೀಟಿಂಗಿನಲ್ಲಿ ನಿಮ್ಮ ಉಳಿವು ನಿಮ್ಮ ಜವಾಬ್ದಾರಿ
( ಪಂಚತಂತ್ರಗಳನ್ನು ಓದಿ )

(೩) ಯಶಸ್ಸಿನ ಏಣಿಯ ಮೆಟ್ಟಿಲ ಮೇಲಿರುವವರನ್ನು ಮೆಟ್ಟಿ ಮೇಲೇರಬೇಕು, ನಿಮ್ಮ ತಪ್ಪುಗಳೇ ನಿಮಗೆ ಮಾರ್ಗಸೂಚಿ.

ವಿವರಣೆ : ನೀವೀಗ ಅಧಿಕಾರದ ಏಣಿಯ ಮುಂದೆ ನಿಂತಿದ್ದೀರಿ. ಒಂದೊಂದು ಮೆಟ್ಟಿಲ ಮೇಲೆಯೂ ಒಬ್ಬೊಬ್ಬರು ಜಾಗ ಹಿಡಿದಿದ್ದಾರೆ. ಅವರನ್ನು ಸ್ಥಾನ ಪಲ್ಲಟಗೊಳಿಸದಿದ್ದರೆ ನಿಮಗೆ ಅಧಿಕಾರವಿಲ್ಲ.

ಒಂದು ತಪ್ಪು ಮಾಡಿ ಪ್ರತಿಕ್ರಿಯೆ ಗಮನಿಸಿ. ನೀವೆಷ್ಟು Important ಎಂದು ನಿಮಗೆ ತಿಳಿದೀತು. Squcking ಎಲ್ಲಿಂದ ನಡೆಯಿತು ಪತ್ತೆ ಹಚ್ಚಿ, ಮೆಟ್ಟಿಲುಗಳನ್ನು ಮೆಟ್ಟಿ ಮೇಲೇರಿ.

(೪) ಯತ್ನಕ್ಕೆ ವಿಜಯ ಒಲಲಿಲ್ಲವೇ, ಆಲ್ಕೋಹಾಲಿನಿಂದ ಸೋಲನ್ನು ತಪ್ಪಿಸಿಕೊಳ್ಳಿ.
ವಿವರಣೆ ಅನಗತ್ಯ.

(೫) ಅತ್ತೆ ಒಡೆದ ಗಡಿಗೆಗೆ ಬೆಲೆಯಿಲ್ಲ.
ವಿವರಣೆ : ಬಾಸ್ ಎಂದೂ ತಪ್ಪುವುದಿಲ್ಲ, ಅವನದು ತಪ್ಪಲ್ಲ: ಉದ್ಯಮ ಸಾಹಸದಲ್ಲಿ ಒಂದು ಪ್ರಯೋಗ. ಮೇಲಧಿಕಾರಿಗಳು ಎಂದೂ ತಪ್ಪು ಮಾಡುವುದಿಲ್ಲ ಎಂದು ಈ ಸೂತ್ರವನ್ನು ಬೇರೆ ರೀತಿಯಲ್ಲಿ ನಿರೂಪಿಸಬಹುದು.

( ಸಶೇಷ )



ಇದನ್ನ 'ಶ್ವೇತಪತ್ರ' ಅಂತ ಯಾಕೆ ಕರೀತಾರೆ ಅನ್ನೋದು ನನಗೂ ಗೊತ್ತಿಲ್ಲ ಸಾರ್.

# ಮಂದಾರ-5

-ರಮ್ಯ

(ಇನ್ನೆರಡು ಗಂಟೆಗಳ ಕಾಲ ಮಾತ್ರ ಉಳಿದಿದೆ _ ಪೋಲಾಳ್ವ ವಿಶ್ವವಿದ್ಯಾಲಯದ ಬಣವೇಕಲ್ ಪ್ರಥಮ ದರ್ಜೆ ಕಾಲೇಜಿನ ಯುಗಳ ಗೀತೆಗಳ ಸ್ಪರ್ಧೆ ನಡೆಯಲು ಅಭ್ಯರ್ಥಿಗಳು- ಹ್ಯಾಂಲೆಟ್ (ಹೆಚ್. ಶಿವು) ಒಂಟಿ. ಮಂದಾರ ಒಂಟಿ, ಓ. ಶಿವು ವಸಂತ. ಎಂ. ಶಿವು - ರಮಾ, ಸಾವಿತ್ರಿ ಒಂಟಿ, ಸ್ಪರ್ಧೆಯ ಸಂಚಾಲಕ ರಾಜೀವ, ಅವನಿಗೆ ಹ್ಯಾಂಲೆಟ್ ಆಯ್ಕೆ ಬೇಕು. ಮಂದಾರ ಬೇಡ. ಹ್ಯಾಲೆಟ್‌ಗೆ ಮಂದಾರಬೇಕು. ಆದರೆ ತನ್ನ ಜೊತೆಯಾಗು ಎಂದು ಕೇಳಲು ಒಲ್ಲ. ಪ್ರಿನ್ಸಿಪಾಲ್ ವೆಂಕಟಪ್ಪ ನವರು ಹ್ಯಾಂಲೆಟ್, ವಸಂತ ಇಬ್ಬರೂ ಆಯ್ಕೆಯಾಗುವುದು ಖಚಿತ ಎಂದು ಆಶ್ವಾಸನೆ ಇತ್ತಿದ್ದಾರೆ. ಅವರನ್ನು ಕಾಣಲು ಪ್ರೊ. ಶೇಖರ್ ಅವರು, ವಾಸು ಕೆ. ಬಬ್ಬುರ್ಯ ಎಂಬ ತರುಣ ರಸಾಯನ ಶಾಸ್ತ್ರ ವಿಜ್ಞಾನಿಯನ್ನು ಕರೆತಂದಿದ್ದಾರೆ. ಈ ನಡುವೆ ಸ್ಪರ್ಧೆ ಗಿಟ್ಟಿರುವ ಭಾವಗೀತೆಗೆ ಮೂರನೆಯ ಚರಣವೊಂದಿದೆಯೇ ? ಕವಿಯ ಮೂಲ ಭಾವವೇನು ಎಂಬ ಚಿಂತೆ ಹ್ಯಾಂಲೆಟ್‌ಗೆ ಬಂದಿದೆ. ಪ್ರಿನ್ಸಿಪಾಲರ ಮನೆಯ ಮುಂದೆ ಕಾರು ಬಂದಿರುವುದನ್ನು ನೋಡಿ ವಾಸು ಕೆ. ಬಬ್ಬುರ್ಯ ಬಂದಿರಬೇಕೆಂದು ಊಹಿಸಿ ಅವರ ಮನೆ ಬಾಗಿಲಿಗೆ ಹೋಗಿದ್ದಾನೆ.)

ಹ್ಯಾಂಲೆಟ್ ಸರಸರನೆ ನಡೆದು ಪ್ರಿನ್ಸಿಪಾಲರ ಮನೆಯ ಕಾಂಪೌಂಡ್ ಗೇಟನ್ನು ತೆರೆದು ಒಳಹೊಕ್ಕ, ಬಾಗಿಲಬಳಿ ಎಂ. ಶಿವು ಉರುಫ್ ಮ್ಯಾಕ್‌ಬೆತ್ತನನ್ನು ಕಂಡ. ಹಲೋ ಎನ್ನುತ್ತಾ ಮ್ಯಾಕ್ಬೆತ್ತನ ಬಳಿ ಹೋದೊಡನೆ ಮ್ಯಾಕ್ಬೆತ್, ತನ್ನ ಪ್ಯಾಂಟಿನ ಜೇಬಿನಿಂದ ನೀಲಿ ಬಣ್ಣದ ಹೊಳೆ ಹೊಳೆಯುವ ಚಾಕೊಂದನ್ನು ತೆಗೆದು ಎಡಗೈಯಿಂದ ಹ್ಯಾಂಲೆಟ್ಟನ ಕೊರಳುಪಟ್ಟಿ ಹಿಡಿದು ತಿವಿಯಲು ಸಿದ್ಧನಾದ.

ಹ್ಯಾಂಲೆಟ್' ಹಲೋ ಮ್ಯಾಕ್ಬೆತ್', ಇದೇನು ರಸ್ತೆಪಕ್ಕದ ಮನೆಯ ಬಾಗಿಲ ಮುಂದೆ ಹಗಲಿನಲ್ಲಿ ಕೊಲೆ ಮಾಡ್ತಿಯಾ? ಬಾ ಮನೆಯ ಹಿಂದಾದರೂ ಹೋಗೋಣವಂತೆ.

ಕೊಲೆ ಮಾಡುವೆಯಂತೆ" ಎಂದ, ಮ್ಯಾಕ್ಬೆತ್ ಕೋಪಾವಿಷ್ಟನಾಗಿ "ದ್ರೋಹಿ ಪ್ರೇಮ ಭಂಜಕ, ಚಾಡಿಕೋರ. ನಿನ್ನ ಅಂತ್ಯಕಾಲ ಬಂದಿದೆ!" ಎಂದ.

ಹ್ಯಾಂಲೆಟ್ "ನಾನು ಯಾರ ಹತ್ತಿರ ಏನೂ ಚಾಡಿ ಹೇಳಿಲ್ಲ ಮ್ಯಾಕ್ಬೆತ್" ಎಂದ.

ಬೀದಿಯಲ್ಲಿ ನಿಂತ ಕಾರಿನ ಹಿಂದೆ ಮತ್ತೊಂದು ಕಾರು ಬಂದು ನಿಂತಿತು. ಪ್ರೊ. ಶೇಖರ್ ತರುಣನೊಬ್ಬನೊಂದಿಗೆ ಅದರಿಂದಿಳಿದರು. ಹ್ಯಾಂಲೆಟ್ ತಕ್ಷಣ ಇವನು ವಾಸು. ಕೆ. ಬಬ್ಬೂರ್ಕರ್ ಇರಬೇಕೆಂದುಕೊಂಡ. ಅಷ್ಟರಲ್ಲಿ ಪ್ರಿನ್ಸಿಪಾಲರು ಹೊರ ಬಾಗಿಲು ತೆರೆದು ಕುಂಟುತ್ತಾ ಬಂದರು. ಅವರ ತಲೆಯ ಬಿಳಿಕೂದಲುಗಳು ಅಚ್ಚುಕಟ್ಟಾಗಿ ಕತ್ತರಿಸಲ್ಪಟ್ಟಿದ್ದವು. ನುಣ್ಣನೆಯ ಮುಖದಲ್ಲಿ ಕನ್ನಡಕದ ಗಾಜಿನ ಹಿಂದೆ ಕಣ್ಣುಗಳು ಕಾಂತಿಯುಕ್ತವಾಗಿ ಥಳಥಳಿಸುತ್ತಿದ್ದವು. ಮೆಲು ನಗು ಅವರ ಮುಖವನ್ನು ಅರಳಿಸಿತ್ತು.

ಅವರು ಮ್ಯಾಕ್ಬೆತ್ತನ ಕೈಯಲ್ಲಿದ್ದ ಚಾಕುವನ್ನು ನೋಡುತ್ತಾ

"ಹಲೋ ಎಂ. ಶಿವ, ಇದು ನನ್ನ ಆಫೀಸಿನಲ್ಲಿ ಮೇಜಿನ ಮೇಲಿದ್ದ ಪೇಪರ್ ನೈಫ್. ಇದರಿಂದ ಬಹುಶಃ ಬಾಳೆಹಣ್ಣನ್ನು ಕತ್ತರಿಸಬಹುದು. ಮರ್ಡರ್ ಅಸಾಧ್ಯ. ಆದೇಕೆ ನಿನ್ನ ಮನಸ್ಸಿನಲ್ಲಿ ಈ ಕೊಲೆ ಹೊಕ್ಕಿತು ಮೋಸೆಸ್ Thou shalt not kill ಎಂದದ್ದು ಮರೆತೆಯಾ. ಹಲೋ ವಾಸು. ಕಮಾನ್ ಬಾಯ್ ಬಹಳ. ಸಂತೋಷ. ನಮ್ಮ ಯೂನಿವರ್ಸಿಟಿಗೆ ನೀನೊಂದು ಹೆಮ್ಮೆ" ಎಂದರು.

ಇತ್ತ ಹ್ಯಾಂಲೆಟ್ ಗಂಟಲನ್ನು ಸರಿಪಡಿಸಿಕೊಂಡು,
"ಸಾರ್ ಇದೊಂದು ಹಾಡು ಕೇಳಿ... ..."
ಅಳಲ ಸಂತೆ ನೂರು ಚಿಂತೆ, ಪಡೆವೆನೆ ಎಂದಾರ
ಜೀವನ ನಂದನದಿ ಅರಳಿ ನಿಂತಿಹ ಮಂದಾರ...."

ದೂರದಲ್ಲೆಲ್ಲೋ ಕತ್ತೆ ಅರಚಿದ ಸದ್ದು. ಗಾಳಿಯಲ್ಲಿ ತರಗೆಲೆಗಳು ಒಂದೋ ಎರಡೋ ತೇಲಿ ಬಂದವು. ಎಲ್ಲೋ ದೂರದಲ್ಲಿ ಯಾರೋ ಕೇಕೆ ಹಾಕಿದರು. ವಾಸು, ಕೆ.ಬಬ್ಬೂರ್ಕರ್ "ವೆರಿ ನೈಸ್, ಯಾವ ರಾಗ ಇದು. Classical ಓ Folk song ಓ..." ಹ್ಯಾಂಲೆಟ್ ಹೇಳಿದ. "ಸರ್ ಇದು ಭೀಮಪಲಾಸ್ ಕಾಮವರ್ಧಿನಿಗಳನ್ನು ಸೇರಿಸಿ ನಾನೇ ರಚಿಸಿದ ಕಾಮ್ ಪಲಾಸ್ ರಾಗ. ನೀವು ಬರೆದಿರುವುದು ಎರಡೇ ಚರಣಗಳನ್ನೋ ಮೂರನ್ನೋ........" ವಾಸು ಮೆಲ್ಲನೆ ನಕ್ಕು "ನಿಮ್ಮ ಸಿಂಗಿಂಗ್ ಟಾಪ್ ಕ್ಲಾಸ್, ಆದರೆ ನಾನು ಇನ್ನೂ ಏನನ್ನೂ ಬರೆದಿಲ್ಲ. ಪರೀಕ್ಷೆಗೆ ಉತ್ತರವನ್ನೂ ಬರೆಯುವ ಹಾಗಿಲ್ಲ."

ಹ್ಯಾಂಲೆಟ್ ಕೇಳಿದ "ನೀವು ಸ್ಟೂಡೆಂಟೇ? ಲೈಬೀರಿಯಾ ಅಥವಾ ಎಥಿಯೋಪಿಯಾದವರಲ್ಲವೇ. ನಿಮ್ಮ ಲಿರಿಕ್ ಇದೆಯಲ್ಲಾ, ಅದು ಕನ್ನಡದ ಅತ್ಯುತ್ತಮ ಭಾವಗೀತೆಗಳಲ್ಲಿ ಒಂದು......."

ವೆಂಕಟಪ್ಪನವರು ಹ್ಯಾಂಲೆಟ್‌ನ ಮಾತನ್ನು ಅರ್ಧಕ್ಕೇ ನಿಲ್ಲಿಸಿ ಹೇಳಿದರು,

"ಹ್ಯಾಂಲೆಟ್, ಇಲ್ಲಿ ಕೇಳು. ರಾಜೀವನಿಗೆ ಹೇಳಿಬಿಡು. ನಾನು, ಶೇಖರ್ ಇಬ್ಬರೂ ಈ ದಿನ ಜಡ್ಜ್ ಮಾಡಲು ಬರುವುದಿಲ್ಲ: ರಾಜೀವನೇ ನನಗೆ ಗೆದ್ದವರ ಲಿಸ್ಟ್ ಕೊಟ್ಟರಾಯಿತು. ಅವನಿಗೆ ಹೇಳಿ ಬಿಡು"

ಹ್ಯಾಂಲೆಟ್ ಏನೋ ಹೇಳಲು ಸಿದ್ಧನಾಗುವಷ್ಟರಲ್ಲಿ ಪ್ರಿನ್ಸಿಪಾಲರು, ಶೇಖರ್ ವಾಸು ಇಬ್ಬರನ್ನೂ ಕರೆದುಕೊಂಡು ಮನೆಯೊಳಕ್ಕೆ ಹೋಗಿಬಿಟ್ಟರು. ಮ್ಯಾಕ್ಬೆತ್ ಮಾಯವಾಗಿ ಎಷ್ಟೋ ಹೊತ್ತಾಗಿತ್ತು.

ಸುಡು ಬಿಸಿಲು, ತೇಗಾಳಿ, ಮತ್ತೊಮ್ಮೆ ದೂರದಲ್ಲಿ ಕತ್ತೆಯ ಕೂಗು, ಹ್ಯಾಂಲೆಟ್ ಒಬ್ಬನೇ ನಿಂತಿದ್ದ, ಬರುವಾಗ ಒಬ್ಬನೇ, ಹೋಗುವಾಗ ಒಬ್ಬನೇ, ಸ್ಪರ್ಧೆಗೆ ಜೋಡಿಯಿಲ್ಲದೆ ಹೋಗುವುದು. ತಾನೊಬ್ಬನೇ, ಏಕೋ ಹೊಟ್ಟೆ ಚುರು ಗುಟ್ಟಿದ ಹಾಗಾಯಿತು.

ಹ್ಯಾಂಲೆಟ್ ಮನೆಗೆ ಹೋಗಿ ಗಬಗಬನೇ ಎರಡು ತುತ್ತು ತಿಂದ. ಅರ್ಧ ಸೋಪು ತಿಕ್ಕಿ ಮುಖ ತೊಳೆದುಕೊಂಡ. ಬಿಳಿಪ್ಯಾಂಟ್ ಮೇಲೆ ಅಮಿತಾಭ್‌ನ ಟೈಪಿನ ಒಂದು ಕೆಂಪು ಪಟ್ಟೆ ಪಟ್ಟೆಯ ಜುಬ್ಬಾ ಹಾಕಿ ಜೇಬಿನಲ್ಲಿ ಒಂದಿಷ್ಟು ಹಣ ಹಾಕಿಕೊಂಡು, ಸರಸ್ವತಿ ಫೋಟೋಕ್ಕೆ ನಮಸ್ಕರಿಸಿದ.

"ಅಮ್ಮಾ, ಬರ್‍ತೀನಿ," ಎಂದು ಹೇಳಿ ಪ್ರತಿಕ್ರಿಯೆಗಾಗಿ ಕಾಯದೆ ಮನೆಯಿಂದ ಹೊರಬಿದ್ದ. ಹಾಗೇ ಮನಸ್ಸಿನಲ್ಲಿ ಭಾವಗೀತೆಯ ಮೂರನೆಯ ಚರಣ ಹೇಗಿರಬಹುದೆಂದು ಯೋಚಿಸುತ್ತಿದ್ದ. ಆದರೆ ಇನ್ನೊಂದೂವರೆ ಗಂಟೆಯಲ್ಲಿ ಸ್ಪರ್ಧೆ ಮುಗಿದು ಹೋಗಿರುತ್ತದೆ. ಆದರಲ್ಲಿ ತನ್ನ ಜೋಡಿಯಾರು? ಮಂದಾರ! ಆಹಾ ಅವಳನ್ನು ಕೇಳುವುದು ಹೇಗೆ? ಅವಳನ್ನು ಬಿಟ್ಟು ಹೇಳುವುದು ಹೇಗೆ ?

ಮಂದಾರ ಸ್ವಲ್ಪ ಗಿಡ್ಡಿ. ಆದರೆ ಕುಳ್ಳಿಯಲ್ಲ, ಅವಳ ಮುಖ ಎಲ್ಲ ತಾರೆಯರ ಮುಖಗಳಿಗಿಂತ ಹೆಚ್ಚು ಸುಂದರವಾಗಿದೆ. ತುಂಬಾ ಫೋಟೋ ಜೆನಿಕ್, ನಮ್ಮ ಕನ್ನಡ ಸಿನಿಮಾಗಳಲ್ಲಿ ಬರೀ ತೆಲುಗರ ತಮಿಳರ ಪ್ರಾಬಲ್ಯ, ಕಾರಣವೇನು ? ನಟಿಯರೆಲ್ಲಾ ಪರಭಾಷೆಯವರು, ಟೆಕ್ನೀಷಿಯನ್ಸ್ ಎಲ್ಲಾ ಹೊರಗಿನವರು, ಷೂಟಿಂಗ್

ರೆಕಾರ್ಡಿಂಗ್ ಎಲ್ಲಾ ಮದ್ರಾಸಿನಲ್ಲಿ. ಪ್ಲೇಬ್ಯಾಕ್ ಸಿಂಗರ್ಸ್ ಎಲ್ಲಾ ಹೊರಗಿನವರೇ. ಸುಮಿತ್ರಾ ಇಲ್ಲವೇ ಲತಾ ಇಲವೇ, ಕಸ್ತೂರಿ ಇಲ್ಲವೇ, ಸುಬ್ಬಣ್ಣ ಇಲ್ಲವೇ ಎಲ್ಲಿವೆ ಅವರಿಗೆ ಛಾನ್ಸ್? ಇದೆಲ್ಲಾ ಕಟ್ಟಿಕೊಂಡೇನು? ಈ ದಿನದ ಸ್ಪರ್ಧೆ ತನ್ನದಾಗ ಬೇಕು ! ಅದು ಹೇಗೆ ಸಾಧ್ಯ ? ಮಂದಾರ ಜೊತೆಯಲ್ಲಿದ್ದರೆ ಮಾತ್ರ ಅದು ಸಾಧ್ಯ. ವಸಂತಾ, ರಮಾ, ನಿಜ ಬೆಟರ್ ಸಿಂಗರ್ಸ್. ಆದರೆ ನನಗೆ ಅವರು ಬೇಡ........"

"ಸ್ವಾಮೀ .. ........"

ಪೋಸ್ಟ್‌ಮನ್ ಕೂಗು ಕೇಳಿ ಬೆಚ್ಚಿಬಿದ್ದ ಹ್ಯಾಂಲೆಟ್.

"ನಿಮಗೆ ಮೂರು ಕವರ್‌ಗಳಿವೆ"

ಹ್ಯಾಂಲೆಟ್ ಆ ಕಾಗದಗಳನ್ನು ತೆಗೆದುಕೊಂಡ. ಮೊದಲ ಕವರ್ ಒಡೆದ. ಅದರಲ್ಲಿದ್ದ ಚೀಟಿ ಹೀಗಿತ್ತು.

"ನನ್ನ ಕನಸಿನ ಗೋಪುರದ ಒಡನಾಡಿ ನೀನೇ ನನ್ನ ಜೊತೆಯಾಗು........ ರ"

ಎರಡನೆಯ ಚೀಟಿ ಹೀಗಿತ್ತು.

Dear Sivu, Team with me Win the contest and my heart. V.

ಮೂರನೆಯ ಚೀಟಿ ಹೀಗಿತ್ತು.

Boy of my dream,

ನಿನ್ನ ಜೊತೆಗೂಡಲು ಕಾಯುತ್ತಿರುವೆ, ಸಾ.

ಹ್ಯಾಂಲೆಟ್ ಆ ಮೂರು ಕವರುಗಳನ್ನು ಚೀಟಿಗಳೊಡನೆ ಹರಿದು ಚರಂಡಿಗೆಸೆದ.

ಜೀವನ ವಿಚಿತ್ರ ! ಮಾನವ ಚಂದ್ರಲೋಕಕ್ಕೆ ಹೋದ, ಆದರೆ ಪ್ರೇಮರಂಗ ದಲ್ಲಿ ಸೋತ. ಆದರೆ ಅದಲ್ಲ ವಿಧಿಯ ನಾಟಕದ ದುರಂತ, ರಮಾ ಎಷ್ಟು ಸೊಕ್ಕಿನವಳು. ಅಂಥವಳು ಬೇಡಿಕೊಂಡಳು. ವಸಂತ ಎಂಥಾ ದಿಮಾಕಿನವಳು, ಅವಳು ತಲೆ ಬಾಗಿದಳು. ಸಾವಿತ್ರಿ, ಎಂಥ ಸಂಪನ್ನೆ ! ಆದರೆ ಕೀರ್ತಿಯ ಹುಚ್ಚಿಗೆ ಬಲಿಯಾಗಿ ಚೀಟಿ ಬರೆಯಲಾರಂಭಿಸಿದ್ದಾಳೆ,

ಆದರೆ ಈ ಮಂದಾರ, ಮೆಲುನಗು, ಪ್ರೀತಿಯ ಮಾತುಗಳಿಂದ ಮನವನ್ನು ಸೂರೆಗೊಂಡಿದ್ದಾಳೆ. ನಿನಗಾಗಿ ನಾನು ಏನು ಮಾಡಲೂ ಸಿದ್ಧ ಎನ್ನುತ್ತಾಳೆ, ಈ ಸ್ಪರ್ಧೆಗೆ ನನ್ನ ಜೊತೆಗಾರನಾಗು ಎಂದೇಕೆ ಕೇಳಬಾರದು,

ಥೂ ಈ ಹುಡುಗಿಯರಿಗೆ ಧಿಕ್ಕಾರ, ಮಂದಾರ ಆದರೇನು ? ಒಣಸಂಪಿಗೆ ತಾನೇ, ಗಂಧವಿಲ್ಲದ ಹಳದಿಯ ಎಸಳು, ನೋಟ, ಹೆಸರು ಆಕರ್ಷಕ. ಆದರೆ

ನಿಷ್ಪ್ರಯೋಜಕ ಎಂದುಕೊಂಡ. ಶಿವು ಹೆಬ್ಬುಗೆಂಟಿಟ್ಟು ಕಾಲೇಜಿನ ಹಾದಿ ತುಳಿದ, ಆದರೆ ಅವನ ಹೃದಯ ಮಂದಾರ, ಮಂದಾರ ಎಂದು ಜಪಿಸುತ್ತಿತ್ತು.

• • •

ಕಾಲೇಜಿಗೆ ಹಾದಿಯಿರುವುದು ಮಂದಾರನ ಮನೆಯ ಮುಂದೆಯೇ ಎಂದು ಹ್ಯಾಂಲೆಟ್‌ಗೆ ಹೊಳೆಯಿತು. ಒಂದು ಮೈಲಿ ಸುತ್ತಾದರೇನಂತೆ. ಅವಳು ಮನೆಯಲ್ಲಿದ್ದರೆ (ಅವಳಿರುವ ಸಂಭವವೇ ಇಲ್ಲ) ಒಮ್ಮೆ ಮಾತಾಡಿಸಿ... ....

ಹ್ಯಾಂಲೆಟ್ ಮಂದಾರನ ಮನೆಯ ಪಡಸಾಲೆಯನ್ನು ಪ್ರವೇಶಿಸಿದ. ಅಲ್ಲಿ ಯಥಾಪ್ರಕಾರ ಕಿಂಗ್‌ಲಿಯರ್ ಕುಳಿತಿದ್ದ – ಸಿಗರೇಟು ಸೇದುತ್ತಾ.

'ಮಂದ......' ಎಂದ ಲಿಯರ್.

'ನಮಸ್ಕಾರ ಸರ್, ಮಂದಾರ ಇದ್ದಾರೆಯೇ' ಎಂದು ಕೇಳಿದ ಹ್ಯಾಂಲೆಟ್. ಲಿಯರ್‌ಗೆ ಹ್ಯಾಂಲೆಟ್ ಬಂದದ್ದು ತಿಳಿದ ಹಾಗೆಯೇ ಕಾಣಿಸಲಿಲ್ಲ.

'ಮಂದ ಇದನ್ನು ತೀರ್ಮಾನಿಸು, ನೀನು ಬರೀ ಪ್ಲೇಬ್ಯಾಕ್ ಸಿಂಗರ್. ಆದರೆ ಏನು ಬಂತು ? ನೀನು ಆ್ಯಕ್ಟ್ರೆಸ್ ಆಗಬೇಕು. ಬೆಂಗಳೂರಿನಲ್ಲಿ ಒಂದು ಮನೆ ಮಾಡೋಣ. ಅಲ್ಲಿ ಎಲ್ಲಾ ಡೈರೆಕ್ಟರುಗಳು ಸಿಗುತ್ತಾರೆ. ಇನ್ವೆಸ್ಟ್‌ಮೆಂಟ' ನೋ ಪ್ರಾಬ್ಲಂ. ನೀನು ಲೀಡಿಂಗ' ಹೀರೋಯಿನ' ಆಗಬೇಕು. ಅವನು ಇವನು ಅಂತ ಈ ಪ್ರಾರಬ್ಧಗಳನ್ನೆಲ್ಲಾ ಕಟ್ಟಿಕೊಳ್ಳಬೇಡ. ನಿನ್ನ ಉದ್ದೇಶ ಏನು ? ಅದನ್ನು ಸಾಧಿಸುವುದು ಹೇಗೆ........"

ಲಿಯರ' ಸಿಗರೇಟನ್ನು ದೀರ್ಘವಾಗಿ ಎಳೆದು ಹೊಗೆ ಊದಿ, ಹ್ಯಾಂಲೆಟ' ಕಡೆ ತಿರುಗಿ

"ಯಾರೂ ? '' ಎಂದ.

"ಶಿವು''

"ಯಾವ ಶಿವೂ .... ''

"ಸಿಂಗರ್..."

"ಆ್ಯಕ್ಟರ್ ಅಲ್ಲವೋ ? ''

"ನೋಡಿ ... ಮಂದಾರ ಇದಾರೆಯೇ ? ''

"ಮಂದ ಇದಾಳೆ.... ಯಾವ ಶಿವು ಅಂತ ತಿಳೀಲಿಲ್ಲ."

ಹೆಚ'. ಶಿವು"

"ಹೆಚ' ಅಂದರೇ.......''

"ಹರಿಪ್ರಸಾದ್... ..."
"ನಮ್ಮ ಹರಿ ಮಗ ಅನ್ನು, ಮುಂದ ಹರೀ ಮಗ ಬಂದಿದಾನ"
ಕಳಿಸು ಡ್ಯಾಡಿ ... .... "
"ಸಿಂಗರ್! ಯಾಕೆ ಆ್ಯಕ್ಟರ್ ಅಲ್ಲ......"

ತುಡಿಯುವ ಹೃದಯದೊಂದಿಗೆ ಹ್ಯಾಂಲೆಟ್ ಕೋಣೆಗೆ ಕಾಲಿಟ್ಟ; ಅವನ ಕಣ್ಣಿಗೆ ಕಂಡಂದೇನು !

ಅಚ್ಚ ಹಳದಿ, ಬಿಳಿ, ಕಾವಿ ಯಾವುದೂ ಅಲ್ಲದ ಬಣ್ಣದ ಸೀರೆಯ ನಿರಿಯನ್ನು ತೀಡಿ ಉಟ್ಟ ಮುಂದಾರ ತಿಳಿದಿಂಗಳಿನ ಕಾಂತಿಯನ್ನು ಹೀರಿದ ಸ್ವಪ್ನಲೋಕದ ಸುಂದರಿಯಂತೆ ನಸುನಗುತ್ತಾ ನಿಂತಿದ್ದಾಳೆ.

"ವೆಲ್‌ಕಂ ಶಿವು. ನಿನಗಾಗಿ ಕಾಯುತ್ತಿದ್ದೆ." ಹ್ಯಾಂಲೆಟ್ ಮಾತನ್ನಾಡಲು ಅಸಮರ್ಥನಾದ.

"ವಾರಕ್ಕೆ ನಾಲ್ಕು ದಿನ ಕಾಣುತ್ತೀ ಶಿವು. ಏನೋ ಹೇಳಲು ಹೋಗುತ್ತೀ ಯಾಕೋ ಸುಮ್ಮನಾಗುತ್ತೀ ಅದೇನು ಹೇಳಿ ಬಿಡು ಶಿವು... "

"ನಿನ್ನ ಪಾರ್ಟ್‌ನರ್ ಯಾರು ? "

"ಕೆಲವರು ಅರೆ ಮನಸ್ಸಿನಿಂದ ಕೇಳುತ್ತಾರೆ. ಆದರೆ ನನ್ನ ಆಶೆ ಬೇರೆ ಶಿವು. ಜೀವನದಲ್ಲಿ ಎಷ್ಟು ನಿರಾಶೆ, ಅಳಲು ತುಂಬಿದೆ ಶಿವು !"

Exactly right. ಹೇಳಬೇಕು ಅಂತ ಆಶೆ, ಗಂಟಲವರೆಗೆ ಬಂದ ಮಾತು ಹಿಂದೆ ಸರಿಯುತ್ತದೆ. ಬಯಕೆ ಗರಿಗೆದರಿ ಹಾರುತ್ತದೆ, ಅದಕ್ಕೊಂದು ನೆಲೆ ಕಾಣದು,"

"ಶಿವು ಒಬ್ಬರಿದ್ದಾರೆ. ಅವರು ಬಂದು ಕೇಳಿದರೆ ನನ್ನ ಆಯ್ಕೆ ಖಚಿತ. ಆದರೆ ಆತ ಕೇಳುತ್ತಿಲ್ಲ. ಅವನು ಎಂದಾದರೂ ಬಂದಾನೆಯೇ ? ಒಂದೇ ಒಂದು ಮಾತು will you ಅಂದರೆ .... ನನ್ನ ಜೀವನ ಸಾರ್ಥಕವಾಗುತ್ತದೆ."

"ಏನಂದೆ ಮುಂದಾ, will you ... "
"ಅಷ್ಟೇ ಎರಡು ಶಬ್ದ"
"ಅಂದರೆ ಆಯಿತೇ ಕಟಾಕಟಾ...."
ಹೊರಗೆ ಲಿಯರ್ ಯಾರೋ ಹುಡುಗಿಯ ಜೊತೆ ಮಾತಾಡುತ್ತಿದ್ದುದು ಕೇಳಿತು.
"ಯಾರು...."
"ಪ್ರಭಾ .... "

"ಯಾವ ಪ್ರಭಾ ?"

"ಬೆಳಿಗ್ಗೆ ಇನ್ನೂ ಬಂದಿದ್ದನಲ್ಲಾ ..."

ಮಂದಾರ ಪೋರ್ಚ್‌ಗೆ ಹೋಗಿ, ಪ್ರಭಾನನ್ನು ಕರೆದುಕೊಂಡು ಅಡಿಗೆ ಮನೆಗೆ ಹೋದಳು. ಹ್ಯಾಂಲೆಟ್ ಮೌನವಾಗಿ ಕೋಣೆಯಿಂದ ನಿರ್ಗಮಿಸಿದ. ಮಂದಾರನ ಮನೆಯ ಮುಂದೆ ಮರದ ಮೇಲೆ ಕುಳಿತ ಜೋಡಿಗುಬ್ಬಿಗಳ ಚಿಲಿಪಿಲಿ, ಅವನ ಪಾಲಿಗೆ ಸಹಿಸಲಾಗದ ಅಪಹಾಸ್ಯವೆನ್ನಿಸಿತು.

• • •

ಮಂದಾರ ಪ್ರಭಾ ಕೈಯಲ್ಲಿದ್ದ ಎರಡು ಕವರ್ ತೆಗೆದುಕೊಂಡು ಒಡೆದಳು. ಮನೆ ಮುಂದೆ ಪೋಸ್ಟ್‌ಮನ್ ಕೊಟ್ಟಿದ್ದಂತೆ.

ಹೃದಯೇಶ್ವರಿ, ಹೂಂ ಎಂದರೆ ಸಾಕು. ನಾನೇ ಒಂದು ಸಿನಿಮಾ ತಯಾರಿಸಿ ನಿನ್ನನ್ನೇ ಹೀರೋಯಿನ್ ಮಾಡುತ್ತೇನೆ. ನೀನು ಹೇಳಿದ ಹೀರೋನನ್ನೇ ಆರಿಸುತ್ತೇನೆ. ಇಪ್ಪತ್ತು ಲಕ್ಷ ನನಗೆ ಏನೂ ಅಲ್ಲ. ಎಂ.

ಇನ್ನೊಂದು

ನೀನು ಬಣ್ಣದ ಚಿಟ್ಟೆಯಂತೆ ಅಲೆಯುತ್ತಿದ್ದರೆ, ನನ್ನ ಬಂದೂಕು ಸುಮ್ಮನಿರುವುದಿಲ್ಲ. ನನ್ನೊಬ್ಬನಿಗೇ ನೀನು.... ಓ

ಮಂದಾರ ಎರಡು ಚೀಟಿಗಳನ್ನು ಹರಿದೆಸೆದು ಜೋರಾಗಿ ನಕ್ಕಳು.

—(ಮುಂದುವರಿಯುವುದು)

---

ಎಂ.ಎಲ್.ಎ ಗಳು ಸಾರ್ವಜನಿಕ ಸೇವಕರಲ್ಲ.

—ಅಂತುಲೆ ಖಟ್ಲೆಯಲ್ಲಿ ಸುಪ್ರೀಮ್‌ಕೋರ್ಟ್ ತೀರ್ಪು.

ಎಂ. ಎಲ್. ಎ ಗಳ ಸ್ವಭಾವ, ಗುಣ, ವರ್ತನೆಗಳ ಆಧಾರದ ಮೇಲೆ ಎಲ್ಲರೂ ತಿಳಿದಿದ್ದ ಸತ್ಯಕ್ಕೆ ನ್ಯಾಯಶಾಸ್ತ್ರದ ಬೆಂಬಲವೂ ದೊರಕಿದಂತಾಯ್ತು, ಅಲ್ಲವೇ ?

—ಮಾರ್ಕೋಪೋಲೋ

— ಶುಭಾಶಯಗಳೊಂದಿಗೆ



**ಎನ್ ಎಸ್ ಗಿರಿಮಾಜಿ ಎಂಡ್ ಸನ್ಸ್**

**(ಬೆಂಗಳೂರು)**

**ನಂ. 46. ಇಂಡಸ್ಟ್ರಿಯಲ್ ಸಬರ್ಬ್**

**ಯಶವಂತಪುರ ಬೆಂಗಳೂರು 560022**

# ಗುಜರಿಗುತ್ತಿಗೆ

—ಜ್ಯೋತ್ಸ್ನಾ ಕಾಮತ್

ಬೆಲ್ ಬಾರಿಸಿತು ಬಾಗಿಲು ತೆರೆದರೆ ಪರಿಚಯದ ಪ್ರೊಫೆಸರ್. ನಕ್ಕು, "ಏನು, ರಾಯರಿಲ್ಲವೇ ? ಗುಜರಿಖಾನೆಗೆ ಹೋಗಿದ್ದಾರೆಯೇ ? ಐ ವಿಲ್ ಫೈಂಡ್ ಹಿಂ ಇನ್ ಜಂಕ್ ಯಾರ್ಡ್" ಎಂದು ಗಾಡಿ ಓಡಿಸಿದರು. ರವಿವಾರ ಬೆಂಗಳೂರಿನಲ್ಲಿ ಸೇರುವ ಕಬಾಡ್‌ಖಾನಾ ಉರ್ಫ್ ಮೊಡಕಾಬಾಜಾರ ಉರ್ಫ್ ಗುಜರಿ ಶಾಲೆಯಲ್ಲಿ ನಮ್ಮವರು ತಪ್ಪದೇ ಹಾಜರಿರುತ್ತಾರೆಂಬುದು ಪರಿಚಯದವರು ಕಂಡುಕೊಂಡ ಸತ್ಯ. ರವಿವಾರದ ರಂಜನೆ ( ಖರೀದಿ ) ಮುಗಿಸಿ ತಿರುಗಿ ಬಂದಾಗ ನಾಲ್ಕು ಕೈ ಚೀಲ ತುಂಬ ತಂದ ಸಾಮಾನು ನೋಡುವಂತಿರುತ್ತವೆ. ಬಣ್ಣವಿಲ್ಲದ ವಾಟರ್ ಕಲರ್ ಬಾಕ್ಸ್ ( ಬಣ್ಣವಿಲ್ಲದಿದ್ದರೇನಂತೆ ? ಬಣ್ಣ ಕಲೆಸುವ ಚಿಕ್ಕ ಟ್ರೇಗಳಿವೆ, –ಮೇಡ್-ಇನ್-ಇಂಗ್ಲೆಂಡ್). ಮೂರು ಕಾಲಿನ ಕುರ್ಚಿ ( ಮೂರು ಕಾಲಿನದಾದರೇನಂತೆ ? ರೋಸ್ ವುಡ್ಡಿನದು. 40/- ಗೆ ಖುರ್ಚಿ ಎಲ್ಲಿ ಸಿಗಬೇಕು ? ). ಕೇವಲ ಅಸ್ಥಿಪಂಜರವಾಗಿರುವ 18 ನೇ ಶತಕದ ಬೀರು ( ಅಮೋಘ ಕಲಾಕೃತಿ, ನಮ್ಮ ಕಾಷ್ಠ ಸಂಸ್ಕೃತಿಯ ಅಳಿದುಳಿದ ಪ್ರತಿನಿಧಿ! ) ಹೊಟ್ಟೆ ಉಬ್ಬಿಸಿಕೊಂಡಿದ್ದ ಬೃಹದಾಕಾರದ ಜಪಾನಿ ಸೆಂಟಿನ ಖಾಲಿ ಬಾಟ್ಲಿ ( ಕೇವಲ 2/- ಗೆ ಸಿಕ್ಕಿದೆ. ಎಂದಾದರೂ ಮಡದಿ ಟೊಮ್ಯಾಟೊ ಸಾಸ್ ಮಾಡಿಟ್ಟರೆ, ವರ್ಷಗಟ್ಟಲೆ ತಿನ್ನಬಹುದು ) ಮೊಂಡಾದ ಕರಗಸ ಬರೆಯದ ಇಂಗ್ಲಿಷ್ ನಿಬ್ಬುಗಳು, ಸೊಟ್ಟ-ಮುಖದ ಟೇಬಲ್ ಲ್ಯಾಂಪು. ಧ್ವನಿಯಿಲ್ಲದ ಕಾಲಿಂಗ್ ಬೆಲ್, ದೃಷ್ಟಿಯನ್ನು ಕಳೆದುಕೊಂಡ ಹಳೇ ಗಡಿಯಾರ; ಹೇಳುತ್ತ ಹೋದರೆ ಕೊನೆ ಮೊದಲಿಲ್ಲ.

ಈ ಬಾರಿಯ ದೊಡ್ಡ ವೈಶಿಷ್ಟ್ಯ- ಬೆಲ್ಜಿಯಮ್ ಸ್ಟೆನ್‌ಸಿಲ್ ಸೆಟ್ಟು " 70 ರೂಪಾಯಿಗಳಿಂದ 15 ರೂಗೆ ಇಳಿಸಿದ್ದೀನಿ " ಎಂದು ಹೆಮ್ಮೆಯಿಂದ ' ಎ ' ದಿಂದ ' ಝಡ್ ' ಅಕ್ಷರಗಳಿದ್ದ ಹಿತ್ತಾಳೆ ಪ್ಲೇಟುಗಳನ್ನು ತೋರಿಸಿದರು. ನಾನು ಅಲಕ್ಷ್ಯ ತಾಳಿದ್ದು ಮನಸ್ಸಿಗೆ ಬಾರದೇ ಎಲ್ಲಿಂದಲೋ ಮಸಿ ತಂದು ಅಕ್ಷರಗಳಲ್ಲಿ ತುಂಬಿ ಮನೆಯ ಎಲ್ಲ ಸಾಮಾನುಗಳ ಮೇಲೆ ತಮ್ಮ ಇನಿಶಿಯಲ್ ಹಾಕಲಾರಂಭಿಸಿದರು. ಫ್ಯಾನು, ಮಂಚ ಸ್ಟ್ಯಾಂಡು, ಮಣೆಗಳು ಎಲ್ಲ ನಾಮಧಾರಿಗಳಾದವು, ನಾನು, ಮಕ್ಕಳು ಮಾತ್ರ ಈ ಹಾವಳಿಯಿಂದ ಉಳಿದುಕೊಂಡೆವು.

ತನ್ನ ಹಾಬಿ, ಬಡವರ ಹಾಬಿ ಎಂದು ಹೇಳುವ ಇವರು ಅಮೇರಿಕೆಯ ಜಂಕ್ ಯಾರ್ಡ್‌ಗಳಿಂದ ಬಹು ಪ್ರಭಾವಿತರು. ಎಲ್ಲೇ ವರ್ಗವಾಗಲಿ, ಮೊದಲ ಊರಲ್ಲಿ ಗುಜರಿ ಶಾಲೆಯ

ಪತ್ರೆ ಹಚ್ಚುತ್ತಾರೆ. ದಿಲ್ಲಿಯ ಚಾಂದನಿ ಚೌಕ್. ಹೈದರಾಬಾದಿನ ಚಾರ್ ಮಿನಾರ್, ಜೈಪುರದ ಚೌಡಾ ರಾಸ್ತಾ, ಬೆಂಗಳೂರಿನ ಮಾರುಕಟ್ಟೆಗಳು ಇವರ ಪ್ರೀತಿಯ ತಾಣಗಳು.

ವರ್ಷಗಟ್ಟಲೆ ಸಾವಿರಾರುಗಳನ್ನು ಪೇರಿಸಿ ಅವನ್ನು ಕಾಯ್ದಿಡುವುದೇ ನಮಗಿಲ್ಲಿ ಸಮಸ್ಯೆ. ಸಾಧಾರಣ ಗಾತ್ರದ ಮಧ್ಯಮವರ್ಗದ ಮನೆ ನಮಗೆ ಸಾಲದಾಯಿತು. ಕೊನೆಗೊಮ್ಮೆ ಮೂರು ಕೋಣೆಗಳ ಮನೆ ಸಿಕ್ಕಾಗ ಒಂದು ರೂಮನ್ನು ಪೂರ್ತಿಯಾಗಿ ಗುಜರಿಖಾನೆಯಾಗಿ ಮಾರ್ಪಡಿಸಿದರು. ಅವರ ಅಪ್ಪಣೆಯಿಲ್ಲದೇ ಯಾರೂ ಒಳಗೆ ಹೋಗುವಂತಿರಲಿಲ್ಲ.

ಮನೆಯಿಂದ ಬೇಸತ್ತು ಇವರ ಕಮ್ಮಟವಾದ ಲ್ಯಾಬಿಗೆ ಹೋದರೆ ಅಲ್ಲಿಯೂ ಪುಟ್ಟ ಮೊಟಕಾ ಬಾಝಾರ್. ಒಂದು ಸಂಜೆ ನನ್ನನ್ನು ಕರೆದುಕೊಂಡು ಹೋಗಿ ಸೊಟ್ಟ ಮುಖದ ಟೇಬಲ್ ಲ್ಯಾಂಪುಗಳನ್ನು ಸರಿಪಡಿಸಿ, ಬೇಕು ಬೇಕಾದಂತೆ ಬೆಳಕು ಬೀರುತ್ತ ನಿಂತ ವೈಖರಿ ತೋರಿಸಿ " ನೋಡು, ಎಷ್ಟು ಟೀಕ ಮಾಡಿದೆಯಲ್ಲ ? ನೂರಾರು ರೂಪಾಯಿ ಖರ್ಚು ಮಾಡುವಲ್ಲಿ ಕೇವಲ ಹತ್ತಾರು ರೂಪಾಯಿಗಳಲ್ಲಿ ಇಂದ್ರಲೋಕ ಮಾಡಿದೀನಿ " ಎಂದರು.

ಮೆಚ್ಚಿಗೆ ಸೂಸುತ್ತಾ, ಹಿಂದೆ ನೋಡದೇ ಇವರು ಕುಳಿತುಕೊಳ್ಳುತ್ತಿದ್ದ ಭಾರೀ ಮ್ಯಾನೇಜರ್ ಖುರ್ಚಿಯಲ್ಲಿ ಕೂತೆ. ಖಟ್ ಖಡಲ್ ಸಪ್ಪಳ, ಕುಳಿತ ಆಸನ, ನನ್ನ ಸಮೇತ ನೆಲಕ್ಕೆ ಕುಪ್ಪಳಿಸಿತ್ತು ! ಸಾವರಿಸಿಕೊಂಡು ಸಾವಧಾನವಾಗಿ ಎದ್ದು ನಿಂತು, ಇವರ ಸಹಾನುಭೂತಿ ಪರ ಮಾತುಗಳಿಗೆ ಲಕ್ಷ್ಯ ಕೊಡದೇ, ಕೈಕಾಲು ಜಾಡಿಸಿಕೊಂಡು ಬಿದ್ದಿದ್ದ ಖುರ್ಚಿ ನೋಡಿದೆ. ನನಗಿಂತ ಸಾಕಷ್ಟು ಭಾರಿ ಮತ್ತು ಎತ್ತರವಿರುವ ವ್ಯಕ್ತಿಯ ಭಾರವನ್ನು ದಿನಕ್ಕೆ ಆರೆಂಟು ತಾಸು ಹೊರುತ್ತಿದ್ದ ಕಾರಣವನ್ನು ಹುಡುಕುತ್ತಾ ಇದ್ದೆ. ಕೊನೆಗೆ ಇವರೇ ಹೇಳಿದರು. ಗುಜರಿ ವ್ಯಾಪಾರದ ಆ ಕುರ್ಚಿಗೆ ಕೊಂಡಾಗಿನಿಂದ ಮೂರೇ ಕಾಲು, ಕಾಲಿಲ್ಲದ ಭಾಗವನ್ನು ಜಾಗರೂಕತೆಯಿಂದ ಗೋಡೆಗೆ ಆನಿಸಿ, ತಮ್ಮ ಕಾಲಿನ ಮೇಲೆ ಭಾರ ಹಾಕಿ, ವಿಶಿಷ್ಟ ಭಂಗಿಯಲ್ಲಿ ಕುಳಿತು ರಾಯರು ದರ್ಬಾರು ನಡೆಸುತ್ತಿದ್ದರು. ಆ ಕುಶಲತೆ ಇಲ್ಲದಾಕೆ ಕುಳಿತಾಗ, ಭಾರ ಹೊರುವ ರೂಢಿಯಿಲ್ಲದ ಖುರ್ಚಿ ನನ್ನನ್ನು ತಿರಸ್ಕರಿಸಿತ್ತು.

" ಒಂದು ನಿಮಿಷ ತಾಳು, " ಎಂದರು. ಎಲ್ಲಿಂದಲೋ ಮೂರು ಪಟ್ಟಿ ಬ್ರೆಕೆಟ್ ತೆಗೆದರು, ಸುತ್ತಿಗೆ, ನಟ್ಟು ಹೊರಬಿದ್ದವು. ಶರ್ಟಿನ ತೋಳೇರಿಸಿ, ಖುರ್ಚಿಯನ್ನು ಹೊಡೆದು, ಬಡಿದು ನೆಟ್ಟಗೆ ನಾಲ್ಕು ಕಾಲಿನ ಮೇಲೆ ನಿಲ್ಲಿಸಿದರು. " ಎಂದ ಆಗಬೇಕಿದ್ದ ರಿಪೇರಿ ನಿನ್ನ ಸ್ಪರ್ಶದಿಂದ ಮುರಿದು ಬಿದ್ದ ಖುರ್ಚಿಗೆ ಜೀವದಾನ

ಯಿತು" ಎಂದರು. ಎಲ್ಲಾ ಗುಜರಿ ಸಾಮಾನುಗಳಿಂದಲೇ ಹೊಂದಿಸಿದ ಆ ಕುರ್ಚಿ ಈ ಆರು ವರ್ಷಗಳಿಂದ ಮುರಿದಿಲ್ಲ.

ಪ್ರತಿಸಲ ಕಸಗುಡಿಸುವಾಗ ಮನೆಯ ಗುಜರಿಖಾನೆ ತೊಂದರೆ ಕೊಡುತ್ತಿದ್ದುದರಿಂದ ಗೊಣಗಲಾರಂಭಿಸಿದೆ. ಕೊನೆಗೆ ಅವರೇ ಎರಡು ದೊಡ್ಡ ಹಳೇ ಟ್ರಂಕ್ ತಂದು ಕೆಟ್ಟುಹೋದ ಸ್ವಿಚ್ಚುಗಳು, ಹಿಡಿಯಿಲ್ಲದ ಉಳಿ, ಲ್ಯಾಂಪ್ ಶೇಡುಗಳು, ಪ್ಲಾಸ್ಟಿಕ್ ಡಬ್ಬಿಗಳು, ಇನ್ನೂ ನೂರಾರು ಚಿಕ್ಕಪುಟ್ಟ ಸಾಮಾನುಗಳನ್ನು ತುಂಬಿ ಬೀಗ ಜಡಿದು ಇಟ್ಟರು. ಬೆಂಗಳೂರಿನ ಹೊಸ ಒಡಾವಣೆಯ ಮನೆಯಲ್ಲಿ ಟ್ರಂಕ್‌ಗಳನ್ನು ಹಾಗೇ ಇಟ್ಟಿದ್ದೆವು. ಕೆಲದಿನ ಊರಿಗೆ ಹೋಗಿಬಂದಾಗ ನೊಡುತ್ತೇವೆ. ಹೊರಕೋಣೆಯಲ್ಲಿದ್ದ ಗುಜರಿ ಟ್ರಂಕ್ ಎರಡೂ ಮಾಯವಾಗಿವೆ! ಹೊಸಮನೆಯಲ್ಲಿ ಹಳೇಸಾಮಾನುಗಳು ತಂತಾನೆ ಕಡಿಮೆಯಾಗಿದ್ದು ಸಂತೋಷವಾಯಿತು. ಇತರ ಪುಟ್ಟ ಸೂಟ್‌ಕೇಸ್ ಗಮನಿಸದೇ ದೊಡ್ಡ ಟ್ರಂಕ್‌ಗಳನ್ನು ಹಾರಿಸಿದ ಕಳ್ಳನನ್ನು ಮನಸ್ಸಿನಲ್ಲೇ ಹರಸಿದೆ. ಆದರೆ ಇವರು ಮಾತ್ರ ತುಂಬ ಬೇಸರದಲ್ಲಿದ್ದರು. ಕೊನೆಗೆ ನಾನೇ. ಹೋಗಲಿ ಬಿಡ್ರಿ, ಈ ರವಿವಾರ ನೀವು ತಿರುಗಿ ಗುಜರಿಗೆ ಹೋದಾಗ ಅವೇ ಸಾಮಾನುಗಳು ಖಂಡಿತವಾಗಿ "ಲಾಟ್" (lot)ದಲ್ಲಿ ನಿಮಗೆ ಕಾಣಸಿಗುತ್ತವೆ! ಈಗಾಗಲೇ ಕೊಂಡ ಸಾಮಾನುಗಳಾದ್ದರಿಂದ ಅವುಗಳ ನಿಶ್ಚಿತ ಬೆಲೆ ನಿಮಗೆ ಗೊತ್ತು. ಮೊದಲಿಗಿಂತ ಅಗ್ಗದಲ್ಲಿ ತರಬಹುದು" ಎಂದೆ. ಸಮಾಧಾನದಿಂದ ಮತ್ತೆ ಹೊರಟಿದ್ದಾರೆ ರವಿವಾರದ ರಂಜನೆಯ (ಗುಜರಿ) ಶಾಲೆಗೆ.

---




" ಸೊಳ್ಳೇಕಾಟ ತಡೀಲಾರ್ದೆ ಇದು ಶುರು ಮಾಡಿದ್ದಾರ "

---

# ರಕ್ತಾಕ್ಷಿ!

—ಶಿವಕುಮಾರ್

---

ಪ್ರತಿಸಾರಿ ಯುಗಾದಿ ಬಂತೂ ಅಂದ್ರೆ, ನಮ್ಮನೇಲಿ, ಎಲ್ಲರಿಗಿಂತಲೂ ನಮ್ಮ ತಾಯಿಗೇ ಹೆಚ್ಚು ಸಂಭ್ರಮ. ಹಿಂದಿನ ಸಂಜೇನೇ ಸೊಸೇನೂ ಸೇರಿಸ್ಕೊಂಡು ಮನೇನೆಲ್ಲಾ ಸಾರಿಸಿದ್ದೂ ಸಾರಿಸಿದ್ದೇ.

"ಬೇವಿನ ಸೊಪ್ಪು ತರಿಸಿವೆಯೇನೇ, ಬೇವು ಬೆಲ್ಲ ಬಡಿಸೋಕೆ" ಅಂತ ನನ್ನ ಹೆಂಡ್ತೀನ ಕೇಳ್ತಿದ್ದಾಗ, ನಮ್ಮ ಮಗಳು ರಾಣಿ "ಅಜ್ಜೀ, ಬೇವು ಅಂದ್ರೇನು?'' ಅಂತ ಕೇಳಿತು. ಅವರ ಅಮ್ಮ ಅಚ್ಚ ಕನ್ನಡವಲ್ಲಿ "ಬೇವು ಅಂದ್ರೆ Neem ಮರ. ಅದು ಬಹಳ ಕಹಿಯಾಗಿರುತ್ತೆ. ಅದ್ರ ಬೆಲ್ಲದ ಜೊತೆ ಸೇರಿಸಿದರೆ ತಿನ್ನಬಹುದು'' ಅಂತ ಸಮಜಾಯಿಷಿ ಹೇಳಿವಳು. ಆಗ ರಾಣಿ "ಪ್ರತಿದಿನ ಬೆಳಗ್ಗೆ ನಾನು Neem ಟೂತ್ ಪೇಸ್ಟ್‌ನಲ್ಲೇ ಹಲ್ಲುಜ್ಜಿಕೊಳ್ಳೋದು. ಆಗ ಸ್ವಲ್ಪ ಒಳಗೆ ಹೋಗೇ ಹೋಗುತ್ತೆ, ಅದಕ್ಕೇ ಬರೀ ಬೆಲ್ಲಾನೇ ತಿಂದು ಬಿಡ್ತೀನಮ್ಮ" ಅಂದು ಬಿಡೋದೆ!

ಯುಗಾದಿ ದಿನ ರಜೆ ಇದೆಯಲ್ಲಾ ಅಂತ ಮಿತ್ರ ಸಚ್ಚೀನ ಊಟಕ್ಕೆ ಬಾ ಅಂತ ಕರೆದಿದ್ದೆ. ಅವನ ಹೆಂಡ್ತಿ ಮಗು ತವರು ಮನೇಗೆ ಹೋಗಿದ್ದರಿಂದ ಅವನು ಟೆಂಪ್ರೊರರಿ ಬ್ಯಾಚುಲರ್ ಸರಿ. ಎಲ್ಲಾ ಅಡಿಗೇ ಸಾಮಾನನ್ನೂ ಹಿಂದಿನ ದಿನವೇ ತಂದಿದ್ದರೂ, ಕಡೇ ನಿಮಿಷದ ಅವಸರ ಇಲ್ಲದಿದ್ದರೆ ಹಬ್ಬಕ್ಕೆ ಕಳೆ ಹೇಗೆ ಕಟ್ಟುತ್ತೆ! ಬೆಳಗ್ಗೆ ಹತ್ತು ಘಂಟೆಗೇ ಹೆಂಡ್ತಿ ಹುಕುಂ. "ಮಾರ್ಕೆಟ್‌ಗೆ ಹೋಗಿ ಇದೊಂದೆರಡು ತರಕಾರಿ ತಂದು ಬಿಡಿ ಅಂದ್ರು! ಹನ್ನೊಂದು ಘಂಟೆಗೆ ಹಿಂತಿರುಗಿದರೂ ಸಾಕು. ಹೇಗಿದ್ದರೂ ಊಟ ಒಂದು ಘಂಟೆಗೇ ತಾನೆ'' ಹೊರಟೆ. ಸಿಟಿ ಮಾರ್ಕೆಟ್‌ಗೇ ಹೋಗಿ ಒರೋಣ ಒಳ್ಳೇ ಚಾಯ್ಸ್ ಇರುತ್ತೆ ಅನ್ನೋ ಕೆಟ್ಟ ಬುದ್ಧಿ ಬೇರೇ ಬಂತು, ಕೇಳಿದ್ದೀರಲ್ಲಾ ವಿನಾಶಕಾಲೇ ವಿಪರೀತ ಬುದ್ಧಿಃ ಅಂತ. ಕಾರನ್ನ ಮಾರ್ಕೆಟ್ ಮುಂದೆ ನಿಲ್ಲಿಸಿ, ದೊಡ್ಡ ಬುಟ್ಟಿ ಹಿಡಿದುಕೊಂಡು ಸಹಾಯಬೇಕೇ ಅಂತ ಅಡ್ಡ ಬರೋ ಗೃಧ್ರಗಳನ್ನೆಲ್ಲಾ ದಾಟಿಕೊಂಡು ಮಾರ್ಕೆಟ್ ಒಳಸೇರಿದೆ. ಅಲ್ಲಾ, ಈಗಿನ ಕಾಲದಲ್ಲೂ ಬುಟ್ಟೀ ತುಂಬಾ ತರಕಾರಿ ಕೊಳ್ಳೋ ಕುಬೇರ ಇದ್ದಾನೆಯೇ? ಇದ್ದರೆ ಅವನು ಎಷ್ಟು ವೆಲ್ತ್‌ಟ್ಯಾಕ್ಸ್ ಕಟ್ಟಬಹುದು. ಅಷ್ಟು ವೆಲ್ತ್ ಇದ್ದರೆ ಅವನ ಎಸ್ಟೇಟ್ ಡ್ಯೂಟಿ ಹೊರೇನ ಅವನ ಮಕ್ಕಳು ಹೇಗೆ ತಡೆಯುತ್ತಾರೆ ಎಂದೆಲ್ಲಾ ಯೋಚನೆಗಳು ಬಂದವು.

ಒಂದೆರಡು ಅಂಗಡೀಲಿ ತರಕಾರಿ ನೋಡುವ ಹೊತ್ತಿಗೆ ಮಾರ್ಕೆಟ್ ಆವರಣದೊಳಗೆಲ್ಲಾ ಒಂದು ತರಹ ಗಲಭೆ. ಬಾಗಿಲು ಇದ್ದ ಅಂಗಡಿಯೋರೆಲ್ಲಾ ಬಾಗಿಲ್ನ ಮುಚ್ಚೋಕ್ಕೆ ಶುರು. ತೆರೆದ ಅಂಗಡಿಕಾರರಾದ ತರಕಾರಿ ಮಾರಾಟಗಾರರು ತರಕಾರೀನ ಇದ್ದಲ್ಲೇ ಬಿಟ್ಟು ದೌಡು. ನನಗೂ ಘಾಬರಿ. ಮೊದಲ ಯೋಚನೆ. ಆತ್ಮಸಂರಕ್ಷಣೆ, ಸರಿ, ಮಾರ್ಕೆಟ್ ಹಿಂದಿನ ಬೀದಿಗೆ ಓಡಿ, ಆಗತಾನೆ ಅವಸರದಿಂದ ಷಟರ್ ಮುಚ್ಚುತ್ತಿದ್ದ ಒಬ್ಬ ಲಬ್ಬೆಯುವನ ಅಂಗಡೀಗೆ ನುಗ್ಗಿದೆ. ಒಳಸೇರಿದ ತಕ್ಷಣ ಹಿಂದೆ ಷಟರ್ ಬಡಿಚಿಕೊಂಡಿತು. "ಏನು ? ಅಂತ ಕೇಳಿದೆ. "ಮಾಮೂಲು ಸಾರ್" ಅಂಗಡಿ ಯುವನ ಉತ್ತರ. "ಇನ್ನೂ ಎಷ್ಟು ಹೊತ್ತಾಗುತ್ತೆ ಎಲ್ಲಾ ಯಥಾಸ್ಥಿತಿಗೆ ಬರೋಕ್ಕೆ?" ನನ್ನ ಪ್ರಶ್ನೆ. "ಇನ್ನೂ ಈವಾಗಲೇ ಎಲ್ಲಿ ಸಾರ್, ಕಲ್ಲು ತೂರೋ ಪುಂಡ ಹುಡುಗರು ಮಾರ್ಕೆಟ್ ಮುಂದಿನ ಬೀದಿಯಿಂದ ಈ ಬೀದೀ ಕಡೆ ಬರೋ ಹೊತ್ತಿಗೇ ಒಂದು ಘಂಟೆ ಆಗುತ್ತೆ.

ಅಂಗಡಿ ಷಟರ್ ಮೇಲೆ ಕಲ್ಲುಗಳು ಬೀಳಲು ಶುರು ಆದಾಗ ಅವರು ಬಂದ ಸೂಚನೆ ಎಲ್ಲಾ ಮುಗಿದ ಮೇಲೆ ಪೋಲೀಸರು ಬಂದು ಬಾಗಿಲು ತೆಗೀರ್ರಿ ಅಂತ ಕೂಗ್ತಾರೆ. ಆಗ ತೆಗೀತೇವೆ".

"ಎಲ್ಲಾ ಕೂಗಿರೋದು ಪೋಲೀಸಿನೋರೇ ಅಂತ ನಿಮಗೆ ಹೇಗೆ ಖಾತ್ರಿ" ನನ್ನ ಸಹಜ ಕುತೂಹಲ. ಅವರ ನಡುಗುವ ದನಿಯಲ್ಲೇ ಗೊತ್ತಾಗುತ್ತೆ ಸಾರ್"

ಅಂತೂ ಅಂಗಡೀ ಬಾಗಿಲು ತೆಗೆದು ಹೊರಬಂದಾಗ ಆಗಲೇ ಒಂದು ಘಂಟೆ. ಬೇಗ ಬೇಗ ಕಾರು ನಿಲ್ಲಿಸಿದ್ದ ಜಾಗಕ್ಕೆ ಹೋದರೆ, ನನ್ನ ಕಾರು ಬಿಟ್ಟರೆ ಹತ್ತಿರದಲ್ಲಿ ಬೇರಾವ ವಾಹನವೂ ಇಲ್ಲ, ಕಾರಿನ ಹತ್ತಿರ ಇಬ್ಬರು ಪೋಲೀಸರು. ಘಾಬರಿಯಿಂದ ಕಾರಿನ ಹತ್ತಿರ ಹೋದರೆ, ಮುಂದಿನ ಗಾಜೆಲ್ಲಾ ಪುಡಿ ಪುಡಿ.

"ನಿಮ್ದಾ ಏನ್ರೀ ಕಾರು ? ಇಲ್ಯಾಕ್ರೀ ನಿಲ್ಲಿಸಿದ್ರೀ ? ಕಾರಿನ ಹಿಂದಿನ ಗಾಜಿನ ಮೇಲೆ 'ಕಣ್ಣನ್ ಟೈರ್ಸ್' ಅಂದ ಚೀಟಿ ಯಾಕ್ರಿ ಅಂಟಿಸಿದ್ದೀರ ?" ಪೋಲೀಸಿನವರಿಂದ ಪ್ರಶ್ನೆಗಳ ಸುರಿಮಳೆ.

"ನಾನು ಹೋದವಾರ ಒಂದು ಟೈರ್ ಕೊಂಡೆ. ಆ ಅಂಗಡಿಯವ ಜಾಹೀರಾತಿಗೋಸ್ಕರ ತನ್ನ ಅಂಗಡೀ ಹೆಸರಿರುವ ಚೀಟಿ ಅಂಟಿಸಿದ್ದಾನೆ ಅಷ್ಟೇ"

"ಅಲ್ರೀ, ಕಣ್ಣನ್ ಅನ್ನೋ ಹೆಸರ್ನ ಕಾರಿನ್ಮೇಲೆ ಎಲ್ಲರಿಗೂ ಕಾಣೋ ಹಾಗೆ ಅಂಟಿಸಿಕೊಂಡು, ಗಾಜು ಒಡೀಬಾರ್ದು ಅಂದ್ರೆ ಹೇಗಾಗುತ್ತೆ ? ಬನ್ರೀ ಸ್ಟೇಷನ್ಗೆ"

ಜಖಂ ಆದ ಕಾರಿನಲ್ಲೇ ಅವನನ್ನು ಕೂರಿಸಿಕೊಂಡು ಸ್ಟೇಷನ್‌ಗೆ ಹೋಗಿ, ಕಂಪ್ಲೇಂಟ್ ಕೊಟ್ಟು, ಕಾರನ್ನು, ನನ್ನನ್ನೂ ಬಿಡಿಸಿಕೊಳ್ಳುವ ಹೊತ್ತಿಗೆ ಮೂರುಘಂಟೆ. ಮನೆಗೆ ಹೋದೆ. ಬಾಗಿಲಲ್ಲೇ ಕೆಂಗಣ್ಣು ಬೀರುತ್ತಾ ಧರ್ಮಪತ್ನಿ ನಿಂತಿದ್ದಳು. ಮಾತಿಲ್ಲ. ಅಷ್ಟರಲ್ಲೇ ಅಲ್ಲಿಗೆ ಬಂದ ರಾಣಿಯ ಪ್ರಶ್ನೆ "ಅಪ್ಪಾ! ಯುಗಾದಿ ದಿನ ಹೊಸ ವರ್ಷ ಬರುತ್ತಂತೆ. ಅಜ್ಜೀ ಹೇಳಿದರು. ಈ ಸಲ ಬಂದಿರೋ ಹೊಸ ವರ್ಷದ ಹೆಸರು ರಕ್ತಾಕ್ಷಿ ಅಂತೆ. ಹಾಗೆಂದ್ರೇನಪ್ಪಾ ? "

ರಕ್ತಾಕ್ಷೀನೇ ? ಅಲ್ಲಿ ನಿಂತಿದ್ದಾಳಲ್ಲಾ ನಿಮ್ಮಮ್ಮ. ಅವಳ ಕಣ್ಣು ನೋಡು. ಅದೇ ಮರಿ ರಕ್ತಾಕ್ಷಿ ! " ಅಂತ ಹೇಳಿ, ಬೇಗ ವರಾಂಡ ದಾಟಿ ರೂಮು ಸೇರಿದೆ.

---

## ಪ್ರೇಮಪತ್ರ

ಕೊನೆಗೂ  
ನಿನ್ನ  
ಅಭಿ  
ಪ್ರಾಯ  
ತಿಳಿಸಲಿಲ್ಲ  
        ಉತ್ತರವಿಲ್ಲದೆ,  
        ಬೇ  
        ಸತ್ತು  
        ಹೋಗ್ತಿದೀನಿ ಕಣೆ  
        ನಿಜವಾಗಿ  
ನಾವು  
ಸುಖವಾಗಿ ಬದುಕಲಿಕ್ಕೆ  
(ವಿ)  
ಶ್ವಾಸ  
ಮುಖ್ಯ ಅಂತೀನಿ  
ಏನಂತೀಯ ?  
        ಜೀ  
        ವನ,  
        ಹೀರಾಗಿರಲಿ  
        ಅದು ಹೇಗೆ ಸಾಧ್ಯವಾದೀತು  
        ಇನ್ನಾದರೂ ಯೋಚಿಸು .

—ವಿನಾಯಕ ಶೇಟ್ ನಗರ.

---

# ಪಾದ್ರಿ ಇಂತೆಂದ

—ಲೀಲಾ ಮಿರ್ಲೆ

ಕೇರಿಯ ಕೊನೆಯ ಮರದಡಿಯಲ್ಲಿ
ಸೇರಿತು ಕಿರಿಯರ ಗುಂಪೊಂದು
ಗುಂಪಿನ ಮಧ್ಯದಿ ಗುಡುಗುವ ದನಿಯಲಿ
ಬೋಧಿಸಿದನು ಪಾದ್ರಿ:

"ಕೇಳಿರಿ ಮಕ್ಕಳೆ ಸ್ವರ್ಗದ ವಿಷಯವ
ಆದ ನಾನರುಹುವ ಸಮಯದಲಿ
ನಮ್ಮೀ ವದನವು ಅರಳಿರಲಿ
ಕಂಗಳು ಬೆಳಕನು ಚಿಮ್ಮುತಲಿರಲಿ
ಸಗ್ಗವು ಮುಖದಲಿ ತೋರಲಿ
ಆದರೆ ನರಕದ ವಿಷಯವ ನುಡಿಯುವ
ಸಮಯದಲಿ........"
ತಡವರಿಸುತ ಇಂತೆಂದನು ಪಾದ್ರಿ
"ನಿಮ್ಮೀ ನಿಜ ಮುಖವೇ ಸಾಕು."

# ಪಕ್ಷಾಂತರ ಪಕ್ಷ

— ಶ್ರೀರಂಗ

ಚುನಾವಣೆ ಬರಲಿದೆ. ನಿಮಗೂ ಗೊತ್ತು. ನಿಮಗೆ ಗೊತ್ತಿಲ್ಲ ಎಂದು ನಾನಿಲ್ಲಿ ಅದನ್ನು ಹೇಳುತ್ತಿಲ್ಲ. ಹುಟ್ಟಿದವನಿಗೆ ಸಾವು ತಪ್ಪದೆಂಬಂತೆ ಪ್ರಜಾಪ್ರಭುವಿಗೆ ಚುನಾವಣೆ ತಪ್ಪದು. ಆದರೆ ಅದಕ್ಕಾಗಿ ನಾವು ಯಾವಾಗಲೂ ಸಿದ್ಧರಾಗಿರಬೇಕು. ಯಾಕೆಂದರೆ, ಕರ್ನಾಟಕ ರಾಜ್ಯದಲ್ಲಿಯ ವಿದ್ಯುಚ್ಛಕ್ತಿಯಂತೆ ಅದು ಸ್ವೈರವೃತ್ತಿಯದು. ನಮಗೆ ಬೇಕೆನ್ನಿಸಿದಾಗ ಬರುವುದಿಲ್ಲ.

ಈಗ ನಾನು ಈ ವಿಷಯದ ಬಗ್ಗೆ ಬರೆಯಲು ಒಂದು ವಿಶೇಷ ಕಾರಣವಿದೆ. ಅದೆಂದರೆ, ನಾನೊಂದು ಹೊಸ ಪಕ್ಷವನ್ನು ಸ್ಥಾಪಿಸಬೇಕೆಂದಿದ್ದೇನೆ. ಈಗಾಗಲೇ ಅನೇಕ ರಾಜಕೀಯ ಪಕ್ಷಗಳಿರುವಾಗ ಇನ್ನೊಂದು ಯಾಕೆ ಎಂದು ನೀವು ಕೇಳಬಹುದು. ಈಗಾಗಲೇ ಅನೇಕ ರಾಜಕೀಯ ಪಕ್ಷಗಳಿವೆ, ನಿಜ. ಆದರೆ ಪಕ್ಷಗಳು ಹೊಸತುವಾದರೂ ಸದಸ್ಯರೆಲ್ಲ ಹಳಬರೆ. ಎಂದರೆ, ಎಲ್ಲರೂ ಸೆಕೆಂಡ್‌ಹ್ಯಾಂಡ್ ಕಾರಿನಂತೆ, ಮೇಲಿನ ಬಣ್ಣ ಬೇರೆ, ಆದರೆ ಒಳಗಿನ ಭಾಗಗಳು ಮುಂಚಿನವು. ಆದುದರಿಂದ ಮಾರುತಿ ಕಾರಿನಂತೆ ತೀರ ಹೊಸತಾದ ಒಂದು ಪಕ್ಷದ ಅಗತ್ಯವಿದೆ.

ಇದಲ್ಲದೆ ನಾನು ಸ್ಥಾಪಿಸಬೇಕೆನ್ನುವ ಪಕ್ಷ ಈಗಿದ್ದ ಎಲ್ಲ ಪಕ್ಷಗಳಿಗಿಂತಲೂ ಮಹತ್ವದ ವಿವರಗಳಲ್ಲಿ ಬೇರೆಯಾಗಿದೆ. ಮೊದಲನೆಯದಾಗಿ, ನನ್ನ ಪಕ್ಷಕ್ಕೆ ಮುಂದಾಳು ಇಲ್ಲ. ಇದನ್ನು ಪ್ರಾರಂಭದಲ್ಲಿಯೇ ಹೇಳುತ್ತಿದ್ದೇನೆ. ಯಾಕೆಂದರೆ, ಪಕ್ಷವನ್ನು ಸ್ಥಾಪಿಸುವುದರ ಉದ್ದೇಶ ಅದರ ಮುಂದಾಳಾಗುವುದು ಎಂಬ ಪದ್ಧತಿ ರೂಢವಿದ್ದುದರಿಂದ ನೀವು ನನ್ನ ಬಗ್ಗೆ ತಪ್ಪು ತಿಳಿಯಬಹುದಾಗಿದೆ. ಹೊಸತೊಂದು ಹೆಸರನ್ನು ಕೊಟ್ಟು ಮುಂದೆ ಕಂಸದಲ್ಲಿ (ಶ್ರೀ) ಎಂದುಕೊಂಡು ನಾನೇ ಮುಂದಾಳಾಗುವೆ ಎಂದು ನಿಮಗನ್ನಿಸಬಹುದು. ಆದುದರಿಂದ ಪಕ್ಷಕ್ಕೆ ಮುಂದಾಳು ಎಂಬುದೆ ಇಲ್ಲ ಎಂದು ಸ್ಪಷ್ಟವಾಗಿ ಸಾರುತ್ತಿದ್ದೇನೆ.

ಎರಡನೆಯ ಮುಖ್ಯ ಮಾತೆಂದರೆ ಪಕ್ಷಕ್ಕೆ ಧ್ಯೇಯವಿಲ್ಲ. ಬಡವರ ಉದ್ಧಾರ, ಅಸ್ಪೃಶ್ಯತಾ ನಿವಾರಣ, ವರ್ಗರಹಿತ ಸಮಾಜ ನಿರ್ಮಾಣ ಮುಂತಾಗಿ ಧ್ಯೇಯವನ್ನಿಟ್ಟು ವರ್ಷಾನುವರ್ಷ ಯಾವುದನ್ನೂ ಸಾಧಿಸದೆ ಇರುವುದಕ್ಕಿಂತ ಧ್ಯೇಯವೇ ಇಲ್ಲದಿರುವುದು ಒಳ್ಳೆಯದು ಎಂದು ನನ್ನ ಅಭಿಪ್ರಾಯ. ಜನತೆಯ ಮೆಚ್ಚುಗೆಯನ್ನು ಪಡೆಯುವುದಾದರೆ ಒಂದೇ ಸವನೆ ಒಂದೇ ಮಾತನ್ನು ಹೇಳಿ ಅದನ್ನು ಸಾಧಿಸದಾಗಿ ಅವರನ್ನು ನಿರಾಶೆ

ಗೊಳಿಸುವುದಕ್ಕಿಂತ ಹೊಸತೊಂದು ಆಶೆಯನ್ನು ಹುಟ್ಟಿಸುವುದು ನಮಗೂ ಅನುಕೂಲ. ಜನತೆಗೂ ಸಮಾಧಾನ. ಒಂದೇ ರೀತಿಯಲ್ಲಿ ಮೋಸಹೋಗುವುದು ಮನುಷ್ಯನ ಸ್ವಾಭಿಮಾನಕ್ಕೆ ತಡೆಯದು. ಆದುದರಿಂದ ಹೊಸತಾದ ವಂಚನೋಪಾಯವನ್ನು ಹುಡುಕುವುದಗತ್ಯ.

ಕ್ಷಮಿಸಿರಿ, ನಿಮ್ಮನ್ನು ವಂಚಿಸುವ ಬಗ್ಗೆಯೇ ಬಹಿರಂಗವಾಗಿ ಮಾತಾಡುತ್ತಿದ್ದೇನೆ. ಒಳಗೊಂದು ಹೊರಗೊಂದು ನನ್ನ ಸ್ವಭಾವಕ್ಕೆ ಒಗ್ಗದು. ಇದಲ್ಲದೆ 1952 ರಿಂದ ಇಂದಿನವರೆಗೆ ಕಾಲಕಾಲಕ್ಕೆ ಮೋಸಹೋದ ನಿಮ್ಮಿಂದ ಈ ಮಾತನ್ನು ಮುಚ್ಚಿಡುವುದರಲ್ಲಿಯೂ ಅರ್ಥವಿಲ್ಲ. ಹಾಗೆಂದರೆ, ಹೊಸ ಪಕ್ಷವನ್ನು ಸ್ಥಾಪಿಸಿ ನಾನೂ ನಿಮ್ಮನ್ನು ವಂಚಿಸಲಿದ್ದೇನೆ ಎಂದು ತಿಳಿಯಕೂಡದು. ನಿಮ್ಮನ್ನು ವಂಚಿಸಲೇಕೂಡದೆಂಬ ಘನ ಉದ್ದೇಶದಿಂದ ನಾನು ಸ್ಥಾಪಿಸುವ ಪಕ್ಷವು ಧ್ಯೇಯತ್ಯಾಗ ಮಾಡಿದೆ.

ಅಂತೂ, ನನ್ನ ಪಕ್ಷಕ್ಕೆ ಧ್ಯೇಯವಿಲ್ಲ ಎಂದಂತಾಯಿತು. ಮುಂದಾಳು ಇಲ್ಲ, ಧ್ಯೇಯ ಇಲ್ಲ—ಇದೆಂತಹ ಪಕ್ಷ ಎಂದು ನಿಮಗೆನ್ನಿಸಬಹುದು. ಅದಕ್ಕೆ ಉತ್ತರವೆಂದರೆ ಈಗಿನ ಪಕ್ಷಗಳಿಗೆ ಮುಂದಾಳು, ಧ್ಯೇಯ ಎರಡೂ ಇದ್ದರೂ ಅವು ಏನನ್ನು ಸಾಧಿಸಿವೆ ? ಆದುದರಿಂದ ನಿಜವಾಗಿಯೆ ಏನನ್ನಾದರೂ ಸಾಧಿಸುವುದಿದ್ದರೆ ಮುಂದಾಳಾಗಲಿ ಧ್ಯೇಯವಾಗಲಿ ಅಗತ್ಯವಿಲ್ಲ ಎಂಬುದು ತರ್ಕಶುದ್ಧ ಸಿದ್ಧಾಂತವಲ್ಲವೆ?

ಮೂರನೆಯ ಮಾತೆಂದರೆ, ನಾನು ಸ್ಥಾಪಿಸಲಿರುವ ಪಕ್ಷದಲ್ಲಿ 'ಶಿಸ್ತು' ಎಂಬುದಕ್ಕಾಗಿ ಯಾರೂ ಹೆದರಬೇಕಿಲ್ಲ. ಪಕ್ಷವು ದುಡಿಯುವುದಕ್ಕೆ ಶಿಸ್ತು ಅಗತ್ಯ ಎಂದು ಹೇಳುವುದೇನೋ ವಾಡಿಕೆಯ ಮಾತಾಗಿದೆ. ಆದರೆ ಅನುಭವವು ಆ ಮಾತಿಗೆ ಪುಷ್ಟಿಯನ್ನು ಕೊಡುತ್ತಿಲ್ಲ. ಧ್ಯೇಯಕ್ಕೆ ವಿರುದ್ಧವಾಗಿ ಮಾತನಾಡುವುದು - ದುಡಿಯುವುದಲ್ಲ - ಒಂದು ಕಾಲಕ್ಕೆ ಶಿಸ್ತುಭಂಗ ಎನ್ನಿಸುತ್ತಿತ್ತು. ಆದರೆ ಕ್ರಮೇಣ ಧ್ಯೇಯ ಸಾಧನೆಗೂ ಪಕ್ಷದ ಕಾರ್ಯವಾಹಕತೆಗೂ ಸಂಬಂಧ ಕಡಿದುಹೋದ ಮೇಲೆ, ಮುಂದಾಳಿನ ವಿರುದ್ಧ ಮಾತನಾಡುವುದು ಶಿಸ್ತುಭಂಗ ಎನ್ನಿಸಿತು. ಆದರೆ ಮುಂದಾಳು ಪಕ್ಷದ ಧ್ಯೇಯಕ್ಕಿಂತ ತನ್ನ ಧ್ಯೇಯದ ಸಾಧನೆ ಮುಖ್ಯ ಎಂದು ತಿಳಿಯತೊಡಗಿದ್ದರಿಂದ ಪರಿಸ್ಥಿತಿ ಬದಲಾಯಿಸಿತು. ಇಂತಹ ಬದಲಾವಣೆಗೆ ಅವಕಾಶವೆ ದೊರೆಯಬಾರದೆಂಬ ಉದ್ದೇಶದಿಂದ ನನ್ನ ಪಕ್ಷಕ್ಕೆ ಮುಂದಾಳಾಗಲಿ ಧ್ಯೇಯವಾಗಲಿ ಇರಲೇಕೂಡದೆಂದು ನಾನು ಮುಂಚಿತವೆ ನಿರ್ಧರಿಸಿದ್ದೇನೆ. ಶಿಸ್ತು ಎಂಬುದು ಇಲ್ಲದ್ದರಿಂದ' ನನ್ನ ಪಕ್ಷವು ಜನಪ್ರಿಯವಾಗಬಹುದು ಎಂಬ ಯೋಚನೆಯಿಂದ ನಾನು ಶಿಸ್ತನ್ನು ಹೊಡೆದುಹಾಕುತ್ತಲಿದ್ದೇನೆ ಎಂದು ಭಾವಿಸಬಾರದು. ಯಾಕೆಂದರೆ, ಜನಪ್ರಿಯತೆಯನ್ನು ಗಳಿಸುವುದು ನನ್ನ ಉದ್ದೇಶವಾಗಿದ್ದರೆ ನಾನು ಬರೀ ಚಲನಚಿತ್ರ ನಟರನ್ನೆ ಸೇರಿಸಿಕೊಳ್ಳಬಹುದಾಗಿತ್ತು. ಇನ್ನೊ

ಬ್ಬರು ಬರೆದುದನ್ನು ಉರು ಹೊಡೆದಾಗಲೂ ಕ್ಯಾಮರಾದ ಎದುರು ನಿಂತು ಅನೇಕ ಸಲ 'ಕಟ್' ಅನುಭವಿಸುವ ನಟನಟಿಯರನ್ನು ನಾನು ಬಲ್ಲೆ. ಇದಲ್ಲದೆ ನಮ್ಮ ಸುದೈವದಿಂದ ಅವರೇ ತಂತಮ್ಮ ಪಕ್ಷಗಳನ್ನು ಸ್ಥಾಪಿಸುತ್ತಿರುವುದರಿಂದ ನಮಗೆ ಅವರ ಹೆದರಿಕೆ ಇಲ್ಲ. ಮನರಂಜನ ಕರವನ್ನು ಕೊಡದೆಯೇ ಅವರ ನಟನೆಯನ್ನು ನೋಡಲು ಜನತೆಗೆ ಅವಕಾಶ ದೊರಯುವುದಲ್ಲದೆ ಬೇರೆ ಯಾವ ಪ್ರಯೋಜನವೂ ಅವರಿಂದ ಲಭಿಸದು.

ಕೊನೆಯದಾಗಿ, ನನ್ನ ಪಕ್ಷಕ್ಕೆ ಒಂದು ಹೆಸರು ಬೇಕಲ್ಲ? ಮಿಕ್ಕ ಎಲ್ಲ ಪಕ್ಷಗಳಿಂದ ಬೇರೆಯಾದ ಪಕ್ಷ ನನ್ನದು ಎಂಬುದು ಅದರ ಹೆಸರು ಆಗದು. 'ಬೇರೆಪಕ್ಷ' —ಎಂದರೆ? ಸಂಸ್ಕೃತವನ್ನು ಕಲಿತರೆ ಕನ್ನಡ ಶ್ರೀಮಂತವಾಗುವುದು ಎಂದು ಇತ್ತೀಚೆಗೆ ಸಂಸ್ಕೃತಕ್ಕಾಗಿ ಅಕಾಡೆಮಿಯ ಪ್ರಶಸ್ತಿಯನ್ನು ಗೆದ್ದವರೊಬ್ಬರು ಹೇಳಿದ ಈ ಸಂದರ್ಭದಲ್ಲಿ ನನ್ನ ನೆನಪಿಗೆ ಬರುತ್ತಿದೆ. 'ಬೇರೆ' ಎಂದರೆ ಸಂಸ್ಕೃತದಲ್ಲಿ 'ಅನ್ಯ'. ಅನ್ಯಪಕ್ಷ ಎಂದರೆ? ಅಥವಾ, ಸಂಸ್ಕೃತ ಭಾಷೆಯ ಅನುಕೂಲವನ್ನೇ ನೆನೆದು 'ಅನ್ಯಃ ಪಕ್ಷಃ' ಎಂದರೆ ಅದೇ 'ಅನ್ಯಃ ಪಕ್ಷಃ ಪಕ್ಷಾಂತರಂ' ಎಂದು ರೂಪುಗೊಳ್ಳುವುದು. ಆದುದರಿಂದ ದೇಶದ ಮಿಕ್ಕ ಭಾಷೆಯ ಜನರಿಗೆ ತಿಳಿಯದ ಕನ್ನಡದಲ್ಲಿ 'ಬೇರೆ ಪಕ್ಷ' ಎನ್ನುವುದಕ್ಕಿಂತ, ಎಲ್ಲರಿಗೂ ತಿಳಿಯುವಂತೆ ಸಂಸ್ಕೃತದ 'ಪಕ್ಷಾಂತರ' ಎಂಬ ಹೆಸರನ್ನಿಡಬಾರದೇಕೆ?

ವಾಚಕರೆ, ಈಗಾದರೂ ನನ್ನ ಪಕ್ಷದ ವೈಶಿಷ್ಟ್ಯ ಹೊಳೆಯಿತೆ? ನನ್ನದು 'ಪಕ್ಷಾಂತರ' ಪಕ್ಷ. ದೇಶದಲ್ಲಿ ಪಕ್ಷಗಳ ಸಂಖ್ಯೆ ಬೆಳೆಬೆಳೆದಷ್ಟು ನನ್ನ ಪಕ್ಷಕ್ಕೆ ಒಳ್ಳೆಯದು. ಯಾಕೆಂದರೆ, ಅಷ್ಟು ನನ್ನ ಪಕ್ಷಾಂತರಕ್ಕೆ ಅವಕಾಶ ಹೆಚ್ಚುವುದು.

ಸದಸ್ಯರಾಗಬಯಸುವವರು ಕೂಡಲೆ ಜೇಬಿಗೆ ಕೈಹಾಕಿ ತಲೆ ತೂಗಬೇಕಾಗಿ ವಿನಂತಿ.

# ದುರ್ವಾಸ ಚರಿತ್ರೆ

—ಲಾಂಗೂಲಾಚಾರ್ಯ

---

ಋಷಿಗಳು ಭಾರತದ್ದೇ ಒಂದು ವೈಶಿಷ್ಟ್ಯವಾಗಿದ್ದಾರೆ. ಅವರು ಮಂತ್ರಗಳನ್ನು ಕಂಡುಹಿಡಿಯುವುದು, ಯಜ್ಞಗಳನ್ನು ಮಾಡಿಸುವುದು, ದಕ್ಷಿಣೆಗೆ ಜಗಳಾಡುವುದು, ತಪಸ್ಸು ಮಾಡಿ ಇಂದ್ರಲೋಕದಲ್ಲಿ ಹೊಗೆ ಎಬ್ಬಿಸುವುದೇ ಮೊದಲಾದ ಇತರ ಕಾರ್ಯಗಳನ್ನು ಮಾಡುತ್ತಿದ್ದರೂ ಅವರ ಒಂದು ಪ್ರಧಾನ ಉದ್ಯೋಗ ಶಾಪ ಕೊಡುವುದಾಗಿತ್ತು. ಆ ಕಾಲದಲ್ಲಿ ಪ್ರಾಣಿಗಳಿಂದ ಹಿಡಿದು ಮನುಷ್ಯರವರೆಗೆ ಎಲ್ಲರೂ ಶಾಪ ಕೊಡುತ್ತಿದ್ದರೆಂಬುದು ನಿಜ. ಆದರೆ ಋಷಿಗಳು ಅದರಲ್ಲಿ ಸ್ಪೆಷಲೈಸ್ ಮಾಡಿದವರಾಗಿದ್ದರು. ಶಾಪ ಕೊಡದಿದ್ದವನು ಋಷಿಯೇ ಅಲ್ಲ ಎನ್ನುವಷ್ಟು ಮಟ್ಟಿಗೆ ಋಷಿ-ಶಾಪ ಸಂಬಂಧ ನಿಗದಿತವಾಗಿತ್ತು. ಋಷಿಗಳು ಶಾಪ ಕೊಡದಿದ್ದರೆ, ರಾಮಾಯಣ, ಮಹಾಭಾರತ, ವಿಷ್ಣು, ಮಾರ್ಕಾಂಡೇಯಾದಿ ಪುರಾಣಗಳಲ್ಲಿ ಯಾವುದೂ ಆಗುತ್ತಿರಲಿಲ್ಲ ಎಂದರೂ ಸಲ್ಲುವುದು.

ಉಳಿದ ಋಷಿಗಳು ಅನೇಕ ಕಾರ್ಯಗಳನ್ನು ನಿರ್ವಹಿಸಿದ್ದುಂಟು. ದುರ್ವಾಸಋಷಿ ಮಾತ್ರ ಶಾಪ ಕೊಡುವುದಕ್ಕಾಗಿಯೇ ಹುಟ್ಟಿದ್ದನೆಂದು ನನಗನಿಸುತ್ತದೆ. ಆತ ಕೊಟ್ಟ ಶಾಪಗಳ ಪಟ್ಟಿಯೇ ಕೆಲವು ಪುಟ ತುಂಬಬಹುದು. ಅವುಗಳ ಕಾರಣ ಪರಿಣಾಮಗಳನ್ನು ಬಣ್ಣಿಸಹೋದರೆ ಒಂದು ಬೃಹದ್ ಗ್ರಂಥವೇ ಆದೀತು. ಇತರ ಋಷಿಗಳು ಸಂದರ್ಭ ತಾನಾಗಿ ಬಂದಾಗ ಶಾಪ ಕೊಡುತ್ತಿದ್ದರೆ ದುರ್ವಾಸ ಶಾಪ ಕೊಡುವ ಸಂದರ್ಭಗಳನ್ನು ಹುಡುಕಿಕೊಂಡು ತಿರುಗುತ್ತಿದ್ದನೆನ್ನಬೇಕು.

ಈ ಉದಾಹರಣೆ ನೋಡಿ. ಲೆತ್ತದಲ್ಲಿ ಸೋತು ಧರ್ಮರಾಯ ವನವಾಸ ಅನುಭವಿಸುತ್ತಿರುವಾಗ ಈ ಋಷಿ ‘ಹಿಂಡು ಶಿಷ್ಯವರ್ಗರಸಿ ಅವನ ಆಶ್ರಮಕ್ಕೆ ಹೋಗುತ್ತಾನೆ, ಯಾವಾಗ? ಧರ್ಮಜನ ಕುಟುಂಬದವರೆಲ್ಲ ಮಧ್ಯಾಹ್ನ ಉಂಡು ಮಲಗಿದ ಮೇಲೆ ಬಂದು "ಹಸಿವಾಗಿದೆ, ಬರಲಿ ಊಟ!" ಎಂದು ಹುಂಕರಿಸಿದ. ಅವನಿಗೆ ಗೊತ್ತು, ಊಟವಾಗಿ ಪಾತ್ರೆ ತಿಕ್ಕಿಟ್ಟ ಮೇಲೆ ಧರ್ಮರಾಯನ ಹತ್ತಿರ ಏನೂ ಇರುತ್ತಿರಲಿಲ್ಲ; ಅವನ ಅಕ್ಷಯಪಾತ್ರೆ ದಿನಕ್ಕೊಮ್ಮೆ ಮಾತ್ರ ಅಡಿಗೆ ಒದಗಿಸುತ್ತಿತ್ತು, ಎಂದು. ಇಲ್ಲ, ಅಂದರೆ ಶಾಪ ಕೊಡಲು ನೆವ ಸಿಗುತ್ತಿತ್ತು. ಪುಣ್ಯಕ್ಕೆ ಆವೊತ್ತು ಮುಸುರೆ ತಿಕ್ಕುವವರ ಅಲಕ್ಷ್ಯದಿಂದಾಗಿ ತೊಳೆದಿಟ್ಟ ಪಾತ್ರದಲ್ಲಿ ಒಂದಗಳು ಅನ್ನವಿದ್ದದ್ದರಿಂದ ಕೃಷ್ಣನ ಉಪಾಯದಿಂದ ಧರ್ಮರಾಯ ಪಾರಾದ ಅನ್ನಿ. ದುರ್ವಾಸ ಸೋತು ಪಲಾಯನ

ಮಾಡಬೇಕಾಯ್ತು.*

ಅಥವಾ ಇಂದ್ರನಿಗೆ ಅವನು ಕೊಟ್ಟ ಶಾಪದ ಪ್ರಸಂಗ ನೋಡಿ. ಅವನು ದೇವ ಲೋಕಕ್ಕೆ ಹೋಗುತ್ತಾನೆ. ಅಲ್ಲಿ ಒಬ್ಬಳು ವಿದ್ಯಾಧರಿಯ ಕೈಯಲ್ಲಿದ್ದ ಮಾಲೆಯ ಪರಿಮಳಕ್ಕೆ ಮೋಹಿತನಾಗುತ್ತಾನೆ. ಸಹಜ ಅನ್ನಿ ; ದುರ್ವಾಸ ಅಂದರೆ ಕೆಟ್ಟ ವಾಸನೆ ಯುಳ್ಳವ** ತನ್ನ ಮೈನಾರಿಟಿಗೆ ತಾನೇ ಹೇಸಿ ಈ ಮಾಲೆಯಿಂದಾದರೂ ಅದು ನೀಗೀತೆಂಬ ಲೆಕ್ಕದಿಂದ ಇರಬೇಕು, ವಿದ್ಯಾಧರಿಯನ್ನು ಹೆದರಿಸಿ ಮಾಲೆ ಇಸಿದುಕೊಂಡ. ಆದರೆ ಜೀವನವೆಲ್ಲ ತನ್ನ ವಾಸನೆಯಲ್ಲಿ ತಾನು ಮುಳುಗಿದ್ದ ಅವನಿಗೆ ಹೂವಿನ ವಾಸನೆ ಬೇಗನೆ ಅಸಹನೀಯವಾಗಿ ಅದನ್ನು ಇಂದ್ರನಿಗೆ ಕೊಟ್ಟ. ಇಂದ್ರನಿಗೇನು ಮಾಲೆಗಳ ಕೊರತೆಯೇ? ಅವನು ಅದನ್ನು ತನ್ನ ಐರಾವತಕ್ಕೆ ಹಾಕಿದ. ಅದು ಅದನ್ನೆಳೆದು ಕಾಲ ಕೆಳಗೆ ಹಾಕಿ ಮೆಟ್ಟಿತು. ಇದಕ್ಕೇ ಕಾಯುತ್ತಿದ್ದ ದುರ್ವಾಸ, ಇಂದ್ರನ ಸರ್ವ ಸಂಪತ್ತು ನಾಶವಾಗುವ ಹಾಗೆ ಶಾಪವಿತ್ತ.

ಅಂಬರೀಷನೆಂಬ ವಿಷ್ಣು ಭಕ್ತನ ಮನೆಗೆ ದ್ವಾದಶಿ ಊಟಕ್ಕೆ ಬರಲೊಪ್ಪಿ, ತಡ ವಾಗಿ ಬಂದ ಆ ರಾಜ ಸಾಧನವೇಳೆ ತಪ್ಪುವುದೆಂಬ ಭಯದಿಂದ ನೀರು ಕುಡಿದು ಆಗಲೇ ಪಾರಣೆಯ ಶಾಸ್ತ್ರ ಮಾಡಿದ್ದನೆಂದು ಕೇಳಿ ಕೋಪಾವಿಷ್ಟನಾಗಿ ಅವನಿಗೆ ಶಾಪ ಕೊಡಹೋಗಿ ಬೇಸ್ತುಬಿದ್ದು ದುರ್ವಾಸ ಪಲಾಯನ ಮಾಡಬೇಕಾಯೀತು. ಆದರೆ ಇಂಥ ಅನುಭವಗಳಿಂದ ಅವನ ಶಾಪಚಟ ಕಮ್ಮಿಯಾಗಲಿಲ್ಲ, ಕೃಷ್ಣನನ್ನೇ ಸತಾಯಿಸಿ

---

* ದುರ್ಯೋಧನನು ಅಮೇರಿಕದ ಸಿ.ಐ.ಎ.ಯಂಥ ಗುಪ್ತಚರ ವಿಭಾಗವನ್ನು ಇಟ್ಟಿದ್ದ ನೆಂದೂ ದುರ್ವಾಸನನ್ನು ಮೆಚ್ಚಿಸಿ ಅದರ ಏಜಂಟ್ ಪ್ರೊವೊಕೆಟಾರ್ ಆಗಿ ಸೇರಿಸಿ ಕೊಂಡಿದ್ದನೆಂದೂ ನಂಬಲು ಆಧಾರಗಳಿವೆ. ಅರಣ್ಯವಾಸದಲ್ಲಿದ್ದ ಪಾಂಡವರ ಹತ್ತಿರ ದುರ್ಯೋಧನನ ಪ್ರೇರಣೆಯಿಂದಲೇ ದುರ್ವಾಸ ಹೋಗಿದ್ದ.

** ದುರ್ವಾಸ ಎಂದರೆ ಕೊಳಕು ಬಟ್ಟೆಯವನೆಂದೂ ಅರ್ಥವಾಗುತ್ತದೆ, ಅವನು ಈಗಿನ ಮಡಿವಂತರ ಹಾಗೆ ಬಟ್ಟೆಗಳಿಗೆ ಸಾಬೂನು ತಾಗಿಸುತ್ತಿರಲಿಕ್ಕಿಲ್ಲ. 'ನಾರು ಮಡಿ' ಎಂದು ದುರ್ವಾಸನ ಹೆಸರನ್ನು ಕನ್ನಡೀಕರಿಸಬೇಕೆಂದು ಒಬ್ಬ ದ್ರಾವಿಡ ಪ್ರೇಮಿ ಸೂಚಿಸಿದ್ದಾರೆ.

ತಪ್ಪು ಹೊರಿಸಿ ಆವನಿಗೆ ಅಂಗಾಲಿಂದ ಮೃತ್ಯು ಬರಲೆಂದು ಶಾಪಕೊಟ್ಟ.

ದುಷ್ಯಂತನನ್ನು ಕಾಡಿನಲ್ಲಿ ಗಂಧರ್ವ ವಿಧಿಯಲ್ಲಿ ಕೂಡಿ, ಆವನು ಬೇಗನೇ ರಾಜಧಾನಿಗೆ ಕರೆಸಿಕೊಳ್ಳುವುದಾಗಿ ಪ್ರಾಮಿಸ್ ಮಾಡಿ ಹೋದನಂತರ ವಿರಹವೇದನೆಯಿಂದ ಚಿಂತಾಕ್ರಾಂತಳಾಗಿ ತನ್ನ ಕೋಣೆಯಲ್ಲಿ ತಲೆಹಿಡಿದು ಶಕುಂತಲೆ ಕುಳಿತಿದ್ದ ವೇಳೆಯಲ್ಲಿ ದೂರ್ವಾಸ ಅಲ್ಲಿ ಹಾಜರಾಗಬೇಕೇ? ತನ್ನದೇ ವ್ಯಥೆಯಲ್ಲಿ ಮುಳುಗಿದ್ದ ಶಕುಂತಲೆ ತತ್‌ಕ್ಷಣ ಬಂದು ತನ್ನನ್ನು ಸತ್ಕರಿಸಲಿಲ್ಲವೆಂದು ರೇಗಿ, ದುಷ್ಯಂತನು ಅವಳನ್ನು ಮರೆತೇ ಬಿಡಲಿ ಎಂದು ದೂರ್ವಾಸ ಶಾಪ ಕೊಟ್ಟ. ಕಾಡಿನ ಹುಡುಗಿಯನ್ನು ಪುಸಲಾಯಿಸಿ ತನ್ನ ಕೆಲಸ ಸಾಧಿಸಿಕೊಂಡ ಮೇಲೆ ದುಷ್ಯಂತನಿಗೆ ಜ್ಞಾನೋದಯವಾಗಿತ್ತು. ಅವಳನ್ನು ಅಂತಃಪುರಕ್ಕೆ ಪಟ್ಟದ ರಾಣಿಯಾಗಿ ಕರೆಸಿಕೊಂಡರೆ, ತನ್ನ ಆಗಲೇ ಇರುವ ಪಟ್ಟದ ರಾಣಿಯನ್ನು ರಿಟೈರ್ ಮಾಡಿಸುವುದು ಹೇಗೆ, ಅದರ ರಾಜಕೀಯ ಪರಿಣಾಮ ಏನಾದೀತು† ಎಂಬ ಪೀಕಲಾಟದಲ್ಲಿದ್ದ ದುಷ್ಯಂತನಿಗೆ ಈ ಶಾಪದಿಂದ ತೂಕಡಿಸುವವನಿಗೆ ಹಾಸಿಗೆಹಾಕಿ ಕೊಟ್ಟಂತಾಯಿತು. ಕಾಡಿನ ಹುಡುಗಿಗೆ ಗಾಯದ ಮೇಲೆ ಬರೆಕೊಟ್ಟು ದೂರ್ವಾಸ ನಿರ್ವಿಕಾರದಿಂದ ಇನ್ನಾರಿಗೆ ಶಾಪ ಕೊಡಲೆಂದು ಅರಸುತ್ತ ಮುಂದೆ ಹೋಗಿಬಿಟ್ಟ.

ದೂರ್ವಾಸ ಶಾಪದ ಸುದ್ದಿ ಎಷ್ಟು ಜನಜನಿತವಾಗಿಬಿಟ್ಟಿತ್ತೆಂದರೆ ಆತ ಬಂದ ಎಂದೊಡನೆ ಜನರಿಗೆ ಶಾಪಭೀತಿಯಿಂದ ನಡುಕ ಹುಟ್ಟುವಂತಾಗಿಬಿಟ್ಟಿತ್ತು. ರಾಮಾಯಣದ ಕಾಲ ಮುಗಿಯುತ್ತಿದ್ದಂತೆ ಆವನು ಒಂದು ದಿನ ಅಯೋಧ್ಯೆಗೆ ಬಂದು, ರಾಮನ ದಿವಾನೇಖಾಸ್‌ನ ಬಾಗಿಲಲ್ಲಿ ಗಸ್ತಿ ಮಾಡುತ್ತಿದ್ದ ಲಕ್ಷ್ಮಣನನ್ನು ಕಂಡ. ಕೂಡಲೇ ರಾಮನನ್ನು ಕಾಣಬೇಕು ಅಂದ, ಒಳಗೆ ಬಿಡದಿದ್ದರೆ ನಿಮ್ಮ ವಂಶವನ್ನೇ ನಾಶ ಮಾಡುವ

---

† ರಾಜರು ಆಗ ರಾಜಕೀಯ ಕಾರಣಗಳಿಗಾಗಿ ಮದುವೆಯಾಗುತ್ತಿದ್ದರು. ನೆರೆಯ ಪ್ರಬಲ ರಾಜರ ಮಿತ್ರತ್ವ ಗಳಿಸಲು ಅಥವಾ ಗಡಿ ಬದಿಯಲ್ಲಿರುವ ಕೀಟಲೆಗಾರ ತುಂಡರಸರನ್ನು ಬುಟ್ಟಿಯಲ್ಲಿ ಹಾಕಿಕೊಳ್ಳಲು ಅವರ ಮಗಳಂದಿರನ್ನು ಮದುವೆಯಾಗಬೇಕಾಗುತ್ತಿತ್ತು. ಇಂಥ ಹೆಂಡಂದಿರನ್ನು ಕೆಳಗಿಳಿಸಿದರೆ ತೊಂದರೆ ಏಳಬಹುದಿತ್ತು. ಸ್ವಾಮೀ, ಅಪ್ಸರೆಯರಿಗೆ ಮನಸೋತು ಲವ್ ಮಾಡಿ ತಪೋಭ್ರಷ್ಟರಾಗುವುದು ಋಷಿಗಳ ಕಸುಬಲ್ಲವೇ? ಅದರ ಬಗೆಗೆ ಒಂದು ಲೇಖನ ಬೇಕು ಎಂಬುದು ಪಬ್ಲಿಕ್ ಡಿಮ್ಯಾಂಡ್ ಪ್ಲೀಸ್. —ಸಂ

ಶಾಪ ಕೊಡುತ್ತೇನೆ ಎಂದ ಲಕ್ಷ್ಮಣನಿಗೆ. ತಾನೇ ಬೆಂಕಿಯ ಪಿಂಡದಂತೆ ಶೀಘ್ರಕೋಪಿಯಾದ ಲಕ್ಷ್ಮಣನಿಗೇ ವೈ ಬೆವರಿತು. ರಾಮನೋ ದಿವಾನೇಖಾಸಿನಲ್ಲಿ ಗುಪ್ತಸಮಾಲೋಚನೆಯಲ್ಲಿದ್ದು ತಾನು ಚಪ್ಪಾಳೆ ತಟ್ಟುವ ಮೊದಲು ಯಾರಾದರೂ ಒಳಗೆ ಬಂದರೆ ಅವರಿಗೆ ಶಿರಶ್ಛೇದ ಮಾಡುವುದಾಗಿ ಸುಗ್ರೀವಾಜ್ಞೆ ಕೊಟ್ಟಿದ್ದ. ದುರ್ವಾಸನ ಶಾಪಕ್ಕಿಂತ ತನ್ನ ತಲೆ ಹೋಗುವುದೇ ವಾಸಿಯೆಂದುಕೊಂಡು ಲಕ್ಷ್ಮಣ ರಾಮನನ್ನು ಡಿಸ್ಟರ್ಬ್ ಮಾಡಿ ಮರಣದಂಡನೆಗೆ ಗುರಿಯಾಗಬೇಕಾಯಿತು.

ದುರ್ವಾಸನ ಗುಣ ಹೀಗೇಕಾಯಿತು? ಕಾರಣವನ್ನು ಊಹಿಸಬಹುದಷ್ಟೇ. ಅವನು ಅತ್ರಿ ಋಷಿ ಮತ್ತು ಅನಸೂಯೆಯ ಮಗ. ಅತ್ರಿಯೇನೋ ಮಹರ್ಷಿ ಹೌದು. ಕಣ್ಣಿನಿಂದ ಚಂದ್ರನನ್ನು ಹಡೆದ ಮಹಾಮಹಿಮ. ಆದರೆ ಅವನು ಶಾಪ ಕೊಡುವುದರಲ್ಲಿ ಮಾತ್ರ ಬಹಳ ಹಿಂದೆಂದು ಅವನ ಚರಿತ್ರೆಯಿಂದ ಅರ್ಥವಾಗುತ್ತದೆ. ಅನಸೂಯೆಯು ಹೆಸರು ಹಾಗಿದ್ದರೂ ತನ್ನ ಓರಗೆಯ ಋಷಿಪತ್ನಿಯರ ಗಂಡಂದಿರು ಶಾಪಕೊಟ್ಟು ಜನರ ಭಯಭಕ್ತಿಗಳನ್ನು ಸಂಪಾದಿಸಿರುವಾಗ ತನ್ನ ಗಂಡ ಮಾತ್ರ ನಿರ್ವೀರ್ಯನಂತೆ ಇರುವುದರಿಂದ ಸ್ತ್ರೀ ಸಹಜವಾದ ಅಸೂಯೆಯುಳ್ಳವಳಾಗಿರಬೇಕು. ಅವಳು ಶಾಪ ಕೊಡಬಲ್ಲ ಒಬ್ಬ ಮಗನಾದರೂ ಆಗಲೆಂದು ತೀವ್ರವಾಗಿ ಹಾರೈಸಿರಬೇಕು. ಆದ್ದರಿಂದಲೇ ಶಾಂತಮೂರ್ತಿ ಅತ್ರಿಗೆ ಈ 'ಚಂಡತಾಪಸ' ಮಗನಾಗಿ ಹುಟ್ಟಿರಬೇಕು; ಅಥವಾ ಹುಟ್ಟಿದ ಮೇಲೆ ಅವನಿಗೆ "ನಿನ್ನ ತಂದೆಯಂತಾಗಬೇಡ: ಜನರ ಪ್ರೀತಿಗಿಂತ ಭಯವೇ ಇಷ್ಟವಾದದ್ದು" ಎಂದು ತರಬೇತಿ ಕೊಟ್ಟಿರಬೇಕು. ಹೆಂಗಸರು ಪ್ರೀತಿಗಿಂತ ಪೌರುಷವನ್ನು ಮೆಚ್ಚುತ್ತಾರೆ.

## ಆಶಾಕಿರಣ

(ರಕ್ತಾಕ್ಷಿಯಲ್ಲಿ ನಡೆಯಬಹುದಾದ ಕತೆ)

—ಅ.ರಾ.ಸೇ.

---

ಮುಗಿಲುಹಳ್ಳಿಯ ಜನರ ಕಷ್ಟ ಕೊನೆಗೊಂಡು ಬಿಟ್ಟಿತ್ತು. ಅವರು ಸುಖವಾಗಿ ಇದ್ದರೆಂದಲ್ಲ ಅಜ್ಜನ ಕಾಲದ ರಾಗಿ ಮುದ್ದೆ, ಜೋಳದ ಭಕ್ರಿ, ಕೆಂಪಿಂಡಿಗಳನ್ನು ನುಂಗಿಯೇ ಅವರು ಮನೆ ಬಿಟ್ಟು ಹೊರಡುತ್ತಿದ್ದರು. ರಕ್ತಾಕ್ಷಿ ಸಂವತ್ಸರದ ವೈಶಾಖ ಮಾಸದ ಪೂರ್ಣಿಮೆಯಂದು ಮುಚ್ಚಿದ ಹೋಟೆಲುಗಳು ಬಹುಳ ಅಷ್ಟಮಿ ಬಂದರೂ ತೆರೆದಿರಲಿಲ್ಲ. ಹೋಟೆಲ್ ತಿಂಡಿದರ ಇಳಿಸಿ ಇಳಿಸಿ ಸುಸ್ತಾದ ಮಾಲಕರು ಗಿಟ್ಟುವುದಿಲ್ಲ ವೆಂದು ಬಾಗಿಲು ಹಾಕಿಯೇ ಬಿಟ್ಟರು. ಮಾಲಕರ ವಿರುದ್ಧ ಕಾರ್ಮಿಕರು ಕೋರ್ಟು ಗಳಿಗೆ ಹೋದರು. ರಸ್ತೆ ಬದಿಯ ಜಲ್ಲಿಕಲ್ಲು ಒಂದೂ ಉಳಿದಿರಲಿಲ್ಲ. ದಿನಕ್ಕೆ ಸುಮಾರು ಐವತ್ತು ಸಾವಿರ ಜನ ಒಂದೂವರೆ ಲಕ್ಷ ಇಡ್ಲಿ ತಿನ್ನುತ್ತಿದ್ದ, ಒಂದು ಲಕ್ಷ ಉದ್ದಿನೊಡೆ ಕತ್ತರಿಸುತ್ತಿದ್ದ, ಎರಡು ಲಕ್ಷ ದೋಸೆ ನುಂಗುತ್ತಿದ್ದ ಕೆಫೆ ಜಿಬ್ರಾಲ್ಟರ್, ಕೆಫೆ ಸಿನ್‌ಸಿನ್ನಾಟಿ. ಕಾಂಟಿಕಿ ರೆಸ್ಟೋರೆಂಟ್, ಶ್ರೀ ಸೀತಾರಾಮ ಫಲಾಹಾರ ಮಂದಿರಗಳು ಇಂದೂ ಕಗ್ಗತ್ತಲಿನಲ್ಲಿ.

ಬೀದಿ ಬದಿಯ ಕೈಗಾಡಿಗಳು ವ್ಯಾಪಾರಕ್ಕಿಳಿದ ಕೆಲವೇ ಗಂಟೆಗಳಲ್ಲಿ ಹಿಂದಿರುಗುತ್ತಿದ್ದವು. ಕನ್ನಡಿಗರು ಕಾನೂನುಪಾಲಕರು. ಪುರಸಭೆಯವರು ಸರ್ಕಾರದ ಆದೇಶದಂತೆ ದರವನ್ನು ನಿಗದಿ ಮಾಡಿದ್ದರು. ಪ್ರದೇಶ ಸಮಾಚಾರ ಹೀಗೆಂದಿತ್ತು. ಗತ ದಿವಸೇ ಮುಗಿಲು ಹಳ್ಳ್ಯಾಂ ಸಮಸ್ತ ಉಪಾಹಾರ ಗೃಹಾಃ ಬಂದಃ ನಾಗರಿಕಾಃ ಬೋಲ ಬೋಲ ಘೋಷಯಂತಿ ಸ್ಮ"

ಪುರಸಭೆಯ ದರಗಳು ಹೀಗಿದ್ದವು :
100 ಗ್ರಾಂ ತೂಗುವ 2 ಇಡ್ಲಿ, 25 ಗ್ರಾಂ ಚಟ್ನಿ, 95 ಮಿಲಿಲೀಟರ್ ಸಾಂಬಾರಿನ 1 ಪ್ಲೇಟಿಗೆ 45 ಪೈಸೆ. ಇದು ಅನ್ಯಾಯವೆಂದು ಹೋ. ಮಾ. ರು ಪ್ರತಿಭಟಿಸಿದ್ದರು. ಪುರಸಭಾ ತಿಂಡಿ ಅಂಗಡಿಯಲ್ಲಿ 80 ಗ್ರಾಂ ತೂಗುವ 3 ಇಡ್ಲಿ, 10 ಗ್ರಾಂ ಚಟ್ನಿ, 48 ಮಿ.ಲೀ. ಸಾಂಬಾರಿನ ಒಂದು ಪ್ಲೇಟಿಗೆ ಒಂದು ರೂಪಾಯಿ. ಹಾಗಿದ್ದರೂ ಅರ್ಧ ವರ್ಷಕ್ಕೆ 3 ಲಕ್ಷ ರೂ. ನಷ್ಟ. ಪುರಸಭಾಧ್ಯಕ್ಷ ಅಲಂಕಾರಪ್ಪನವರು ಹೀಗೆ ವಿವರಣೆ ಕೊಟ್ಟರು. ಪುರಸಭೆ ಇರುವುದು ಹೋಟೆಲ್ ನಡೆಸಲಲ್ಲ. ಆದ್ದರಿಂದ ಇದು ನಷ್ಟವಲ್ಲ. ಪುರಸಭೆಯಲ್ಲಿ ಕೆಲಸಕ್ಕೆ ಬರುವ ಜನರು ಕ್ಯೂನಲ್ಲಿ ನಿಲ್ಲಲು ಅವರಿಗೆ ಅಗತ್ಯ

ವಾದ ಕ್ಯಾಲೊರಿ ದೊರೆಯುಲಿ ಎಂದು ಈ ಕ್ಯಾಂಟೀನು. ಲಾಭ ಗಳಿಸಲಲ್ಲ"

ಮಾನ್ಯ ಮಂತ್ರಿ ಮಹೋದಯರು ಈ ವಾದ ಬೆಂಬಲಿಸಿದ್ದರು. ಜನಕಲ್ಯಾಣ ಕ್ಕಾಗಿ ಈ ದರ ಇಳಿತಾಯ ಅಗತ್ಯ. ರಾಜ್ಯದ ರಾಷ್ಟ್ರದ ವಿಶ್ವದ ಜನತೆಗೆ ಅಗ್ಗದ ಉಪಾಹಾರ ಅಗತ್ಯ. ಈ ಪುರಸಭೆಗೆ ಸರ್ಕಾರದ ಪೂರ್ಣ ಬೆಂಬಲ. ಮುಗಿಲುಂ ಹಳ್ಳಿಯ ಮುಖ್ಯ ಆಹಾರವಾದ ಮಂಡಕ್ಕಿ, ಖಾರ, ಮೆಣಸಿನಕಾಯಿ, ನೀರುಳ್ಳಿ. 20 ಸೆಂಟಿಲೀಟರ್ ಮುಂಡಕ್ಕಿ, ಒಂದು ಮೆಣಸಿನಕಾಯಿ, 25 ಗ್ರಾಂ ಖಾರ, 2 ನೀರುಳ್ಳಿ ತುಂಡು, ಒಟ್ಟು ತೂಕ 100 ಗ್ರಾಂಗೆ 25 ಪೈಸೆ ನಿಗದಿಯಾಗಿತ್ತು. ಕಡ್ಲೆಹಿಟ್ಟು, ಸೇಂಗಾಎಣ್ಣೆ, ನೀರುಳ್ಳಿಗಳ ರೇಟು ಗಗನಕ್ಕೇರಿದ್ದರೂ ಜನಹಿತಕ್ಕಾಗಿ ಈ ದರ ಫಿಕ್ಸ್ ಮಾಡಲಾಗಿತ್ತು.

ಎಚ್ಚೆತ್ತ ಜನತೆ ಕೈಗಾಡಿಗಳ, ತಕ್ಕಡಿಗಳ ಮೋಸ, ಮಂಡಕ್ಕಿಯ ಹೆಸರಿನಲ್ಲಿ ಸಿಕ್ಕುವ ಕಲ್ಲು ಇತ್ಯಾದಿಗಳನ್ನು ಪತ್ತೆಹಚ್ಚಿ ಕೈಗಾಡಿಗಳನ್ನು ಹಿಂದಕ್ಕೆ ಕಳಿಸಲಾರಂಭಿ ಸಿದ್ದರು.

ಎಲ್ಲರ ಮನೆಯಲ್ಲೂ ಗೃಹಿಣಿಯರಿಗೆ ಮಾನ್ಯತೆ ಹೆಚ್ಚಿ, ಗಂಡಸರು ಹೆಂಗಸರ ದಾಸ ರಾಗಿದ್ದರು. ಆದರೆ ಚಪಲದ ಬಾಯಿಗಳು ಹೃದಯಗಳಲ್ಲಿ ಅತೃಪ್ತ ಆಸೆಗಳನ್ನು ಕೆರಳಿ ಸಿದ್ದವು.

ಅಪ್ರತಿಮ ಜನನಾಯಕ, ಮುಗಿಲುಂಹಳ್ಳಿಯ ಏರುತ್ತಿರುವ ತಾರೆ, ಡೆಪ್ಯುಟಿಮಂತ್ರಿ ಬಕ್ಕಪ್ಪನವರು ಬಹುಳ ನವಮಿಯಂದು ಮುಗಿಲುಂಹಳ್ಳಿಗೆ ಆಗಮಿಸುವರೆಂಬ ಸುದ್ದಿ, ಮಧ್ಯಪ್ರಾಚ್ಯದ ಅಶಾಂತಿಯಂತೆ ಹಬ್ಬಿತು. ತಮ್ಮ ನೆಚ್ಚಿನ ನಾಯಕನನ್ನು ನೋಡಲು ಹದಿನೈದು ಸಾವಿರ ಜನ ಮುಗಿಲುಂಹಳ್ಳಿಗೆ ಬರುವವರಿದ್ದರು. ಪುರಸಭಾಧ್ಯಕ್ಷರು ನಾಲಿಗೆ ಕೆಟ್ಟು, ಮನಸ್ಸಿನಲ್ಲೇ ಕ್ಯಾಂಟೀನಿನ ಅಡುಗೆಯವನ ಮೇಲೆ ರೇಗಿ, ಊರಿನ ಎಲ್ಲ ಹೋಟೆಲುಗಳಿಗೂ ಫೋನ್ ಮಾಡಿದರು.

ಮಾನ್ಯ ಡೆಪ್ಯುಟಿ ಮಂತ್ರಿಗಳಿಗೆ ನಿಗದಿತ ರೇಟುಗಳಲ್ಲಿ ತಿಂಡಿ ಒದಗಿಸಲು ಯಾರೂ ಸಿದ್ಧರಿರಲಿಲ್ಲ. ಬಲವಂತ ಪಡಿಸಿದರೆ ಕಾನೂನು ಉಲ್ಲಂಘನೆಗೆ ತಾವೇ ಪ್ರಚೋದನೆ ಮಾಡಿದಂತಾಗುತ್ತದೆ.

ರಕ್ತಾಕ್ಷಿ ಸಂವತ್ಸರದ ವೈಶಾಖ ಬಹುಳ ನವಮಿ ಮಂಗಳವಾರ ಮಧ್ಯಾಹ್ನ ನಾಲ್ಕು

ಗಂಟೆಗೆ 'ಆಶಾಕಿರಣ' ರಕ್ಷಾಕ್ಷಿ ರೆಸ್ಟೋರೆಂಟಿನ ಉದ್ಘಾಟನೆಯಾಗಬೇಕೆಂದು ಹೋಟೆಲ್ ಕಾರ್ಮಿಕರ ಸಹಕಾರ ಸಂಘದವರು ಮಂತ್ರಿಗಳನ್ನು ಕೇಳಿಕೊಂಡರು.

ತಮ್ಮ ನೆಚ್ಚಿನ ನಾಯಕನಲ್ಲಿಟ್ಟಿರುವ ಪ್ರೀತಿಯನ್ನು ತೋರಿಸಲು ಹೋಟೆಲ್ ಮಾಲಕರ ಸಂಘದ ಕಟ್ಟಡದಲ್ಲೇ 'ಆಶಾಕಿರಣ' ತೆರೆಯಲು, ಮಾಲಕರು ಅನುವು ಮಾಡಿ ಕೊಟ್ಟರು.

ಮಧ್ಯಾಹ್ನ ಮೂರೂ ಐವತ್ತೈದಕ್ಕೆ ಮಂತ್ರಿಗಳು ಬಂದರು. ನಾಲ್ಕಕ್ಕೆ ಸರಿಯಾಗಿ ಟೇಪ್ ಕತ್ತರಿಸಿದರು. ಕಾರ್ಮಿಕ ಸಂಘದ ಕಾರ್ಯದರ್ಶಿಗಳು ಮಂತ್ರಿಗಳನ್ನು ತೂಗುಹಾಕಿದ್ದ ತಕ್ಕಡಿಯೊಂದರ ಮುಂದೆ ನಿಲ್ಲಿಸಿದರು. ಪುಟ್ಟಿಯಲ್ಲಿ ಇಡ್ಲಿ ತರಲಾಯಿತು ಎರಡು ಇಡ್ಲಿಗಳು 100 ಗ್ರಾಂ ತೂಗುವುದನ್ನು ಪರೀಕ್ಷಿಸಲು ಮಂತ್ರಿಗಳಿಗೆ ಅರ್ಧ ಗಂಟೆಯಾಯಿತು. ಯಾವ ಎರಡು ಇಡ್ಲಿಗಳೂ ಕರೆಕ್ಟಾಗಿ 100 ಗ್ರಾಂ ತೂಗಲಿಲ್ಲ. ನಂತರ ಮಂತ್ರಿಗಳಿಗೆ ಒಂದು ಬ್ರೈಟ್ ಐಡಿಯಾ ಹೊಳೆಯಿತು. ಇಡ್ಲಿಗಳನ್ನು ತುಂಡುತುಂಡು ಪುಡಿಪುಡಿ ಮಾಡಿ ಇಟ್ಟು ಚಮಚಾ ಹಾಕಿ ಏಕೆ ತೂಗಬಾರದು? ಅಧ್ಯಕ್ಷರು ತೂಗು ಹಾಕಿದ ತಕ್ಕಡಿ ಬೇಡ.

"ಅದೆಂಥವೋ ಇರ್ತವಲ್ರೋ ಏನಂತರೆ ಅದ್ರಗಿಟ್ರೆ ಮುಳ್ಳು ತೋರ್ಸ್ತತಲ್ಲ, ಅದನ್ನು ತರ್‍ರೀ" ಅಂದರು.

"ಅಣ್ಣಾ ಇದಕ್ಕೇ ರೊಕ್ಕಿಲ್ಲ" ಎಂಬ ಉತ್ತರ. ಮಂತ್ರಿಗಳು ಲೋನ್ ಕೊಡಿಸುವುದಾಗಿ ಆಶ್ವಾಸನೆ ಇತ್ತರು. ಅವರ ಮುಂದಿನ ಕೆಲಸ 15 ಗ್ರಾಂ ಚಟ್ನಿಯ ತೂಕ. ಆ ವೇಳೆಗಾಗಲೇ ಹಸಿದ ನಾಗರಿಕರು ಆಶಾಕಿರಣದೊಳಕ್ಕೆ ನುಗ್ಗಿ ಇಡ್ಲಿಗಳನ್ನು ತೂಗಲು ಆರಂಭಿಸಿದ್ದರು.

ಮಂತ್ರಿಗಳಿಗೆ 15 ಗ್ರಾಂ ಚಟ್ನಿ ಅಷ್ಟು ಕಡಮೆ ಇರುತ್ತದೆಂದು ಕನಸೂ ಬಿದ್ದಿರಲಿಲ್ಲ. ಜನಗಳು ನುಗ್ಗಿ ಇಡೀ ಕಟ್ಟಡ ಕುಲುಮೆಯಂತೆ ಬಿಸಿಯಾಗಿತ್ತು. ಕರೆಂಟ್ ನಿಂತು ಫ್ಯಾನ್ ನಿರುಪಯೋಗಿಯಾದವು. ಬಳಿಕ ನೀರು ಕುಡಿಸಲು ಒಲೆಗಳಿಗೆ ಸೇಂಗಾ ಹೊಟ್ಟು ಹಾಕಲಾಯಿತು. ಹೊಗೆ ಇಡೀ ಕಟ್ಟಡವನ್ನು ಆವರಿಸಿತು.

ಮಾನ್ಯ ಮಂತ್ರಿವರ್ಯರಿಗೆ 95 ಮಿ.ಲೀ. ಅಳತೆ ಸಿಗಲಿಲ್ಲ. ಈಗ ಮುಂದೇನು ಎಂದು ಕೇಳಿದರು. ಅವರೆದುರು ಎರಡು ಚಿಕ್ಕ ಅಳತೆ ಪಾತ್ರೆ ತಂದರು. 100 ಮಿ.ಲೀ. ಸಾಂಬಾರ್ ಅಳೆದುಕೊಂಡು ಅದರಿಂದ 5 ಮಿ.ಲೀ. ತೆಗೆದು ಪಾತ್ರೆಗೆ ಹಾಕ

ಬೇಕೆಂದು ಸೂಚನೆ ಬಂತು.

ಈ ವೇಳೆಗಾಗಲೇ ದಟ್ಟ ಹೊಗೆ ಕವಿದಿದ್ದರಿಂದ ಜನ ಕೈಗೆ ಸಿಕ್ಕದ್ದನ್ನು ತೆಗೆದು ಕೊಂಡು, ಬಿಲ್ ಕೇಳಲಾರಂಭಿಸಿದರು. 15 ಗ್ರಾಂ ಚಟ್ನಿಗೆ, 12 ಪೈ, 95 ಮಿ.ಲೀ. ಸಾಂಬಾರಿಗೆ 13 ಪೈಸೆ, ಬೆಲೆ ಕೇಳಲಾಯಿತು. ಬಿಲ್ ಕೇಳಿದವರು ಕಣ್ಣು ಮುಚ್ಚಿ ಸೀನಿದರು. ಕೊಡುವವರು ಕಣ್ಣು ಮುಚ್ಚಿ ತಮ್ಮ ಇತರರ ಜೇಬುಗಳಿಗೆ ಕೈಯಿಟ್ಟರು.

ಆದರೆ ಒಂದೂ ಜಗಳವಾಗಲಿಲ್ಲ. ಮಂತ್ರಿಗಳು ತಮ್ಮ ಜೀವನದಲ್ಲಿ ಇನ್ನು ಎಂದೇದೂ ಇಡ್ಲಿ ತಿನ್ನುವುದಿಲ್ಲ ಎಂದು ಘೋಷಿಸಿದರು.

ಬಳಿಕ ಎಲ್ಲಾ ಮಾಮೂಲಿನಂತೆ ನಡೆದಿದೆ. ಪುರಸಭೆಗೂ ಜನರಿಗೂ ಒಪ್ಪಂದ ವಾಗಿ ಮೊದಲಿನ ಅವ್ಯವಸ್ಥೆಯಲ್ಲೇ ಎಲ್ಲಾ ಹೋಟೆಲುಗಳು ನಡೆಯುತ್ತಿವೆ.

"ರಕ್ತಾಕ್ಷಿ"ಯ ಆಶಾಕಿರಣ ತೆರೆದ ದಿನವೇ ಮುಚ್ಚಿದೆ.

(ನೆರವು : ಕ್ಯಾಟರರ್)

# ಮುಳ್ಳು

—ಜೀಪಿ

ಅಖಂಡ ಬ್ರಹ್ಮಚಾರಿಯೊಬ್ಬನ ಕಾಲಿಗೆ ಒಮ್ಮೆ ಒಂದು ಮುಳ್ಳು ಚುಚ್ಚಿಕೊಂಡಿತು. ನೋವಿನಿಂದ ನಡೆಯಲಾಗದೆ ಕುಂಟಬೇಕಾದ ಪರಿಸ್ಥಿತಿ ಬಂದಾಗ ಮುಳ್ಳನ್ನು ತೆಗೆದು ಹಾಕುವ ಪ್ರಯತ್ನ ಮಾಡಿದ. ನೆಲದ ಮೇಲೆ ಕೂತು ಮುಳ್ಳು ಹೊಕ್ಕ ಕಾಲಿನ ಅಂಗಾಲು ಸರಿಯಾಗಿ ಕಾಣುವಂತೆ ತೊಡೆ ಅಗಲಿಸಿ ಮಂಡಿ ಬಗ್ಗಿಸಿ ಹೆಜ್ಜೆ ತಿರುವಿ ಪ್ರಯಾಸಪಟ್ಟ. ಈ ಕಸರತ್ತಿನಲ್ಲಿ ತೊಡೆ ಉಳುಕಿತು, ಮಂಡಿ ಚಿಪ್ಪು ಜರುಗಿತು. ಮುಳ್ಳು ಮಾತ್ರ ಕೈಗೆ ಸಿಗದೆ ಅಂಗಾಲಿನಲ್ಲಿ ಹೂತುಕೊಂಡುಬಿಟ್ಟಿತು.

ಬೇರೆ ಯಾರಾದರೂ ಸಹಾಯ ಮಾಡಬಹುದೆಂದು ನಿರೀಕ್ಷಿಸತೊಡಗಿದ. ದಾರಿಯಲ್ಲಿ ಹೋಗುವವರನ್ನೆಲ್ಲಾ ಪರೀಕ್ಷಿಸಿ ಯಾರನ್ನು ಕೇಳಬಹುದೆಂದು ತನ್ನಲ್ಲೇ ವಿಚಾರಿಸತೊಡಗಿದ. ಮಕ್ಕಳಿಗೆ ಮುಳ್ಳು ತೆಗೆಯುವುದು ಬರುವುದಿಲ್ಲ; ಹೆಂಗಸರನ್ನು ಹೇಗೆ ಮಾತಾಡಿಸಬೇಕು? ಮುದುಕರಿಗೆ ಕಣ್ಣುಮಂದ. ಯುವಕರಿಗೆ ತಮ್ಮದೇ ಚಿಂತೆ, ಆತುರ-ಇದಕ್ಕೆಲ್ಲಾ ವ್ಯವಧಾನವಿಲ್ಲ. ಯಾರು ತನ್ನ ಕಾಲು ಮುಟ್ಟಿದರೂ, ಮುಳ್ಳು ತೆಗೆದನಂತರ ಕಣ್ಣಿಗೊತ್ತಿಕೊಳ್ಳಲು ತಯಾರಿದ್ದ. ಆದರೆ ಯಾರನ್ನೂ ಕೇಳುವ ನಿರ್ಧಾರ ಮಾಡಲಾಗದೆ ಪರಿತಾಪ ಪಡುತ್ತಿದ್ದ. ಸಂಜೆಯಾಯಿತು.

ಅವನು ಕುಳಿತಿದ್ದ ಮರದಡಿಯ ಸಮೀಪದಲ್ಲಿದ್ದ ಶಾಲೆಯಿಂದ ಮಕ್ಕಳು ಗಲಾಟೆ ಮಾಡುತ್ತಾ ಬೀದಿಗೆ ಓಡಿದರು. ಒಂದೆರಡು ನಿಮಿಷಗಳಲ್ಲೇ ಮೇಷ್ಟರೂ ಕೈಚೀಲ ಹಿಡಿದುಕೊಂಡು ಬಂದರು. ಬ್ರಹ್ಮಚಾರಿ ಧೈರ್ಯ ತಂದುಕೊಂಡು, 'ಕಾಲಿಗೆ ಮುಳ್ಳು ಹೊಕ್ಕಿದೆ, ತೆಗೆದು ಉಪಕಾರ ಮಾಡುತ್ತೀರಾ?' ಎಂದು ಕೇಳೇಬಿಟ್ಟ. ಮುಳ್ಳು ತೆಗೆಯಲು ತಾನು ಪಟ್ಟ ಬವಣೆಯನ್ನು ಕರುಣಾಜನಕವಾಗಿ ವಿವರಿಸಿದ. ಮೇಷ್ಟರು ಅವನ ಕಾಲನ್ನು ಪರೀಕ್ಷಿಸುತ್ತಾ, 'ನನ್ನ ಕಣ್ಣು ಮಂಜು ಆದೂ ಅಲ್ಲದೆ ಕತ್ತಲಾಗ್ತಿದೆ... ಮನೆಗೆ ಹೋಗಿ ನಿಮ್ಮ ಮನೆಯಾಕೆ ಕೈಯಿಂದ ತೆಗೆಸಿಕೊಳ್ಳಿ' ಎಂದು ಉಪದೇಶ ಮಾಡಿದರು. 'ನಾನು ಬ್ರಹ್ಮಚಾರಿ' ಎಂದ. 'ಹೌದೇ, ಪಾಪ! ಒಂದು ಮುಳ್ಳನ್ನು ತೆಗೆಯಲು ಮತ್ತೊಂದು ಮುಳ್ಳು ಬೇಕೇಬೇಕು', ಎನ್ನುತ್ತಾ ಮೇಷ್ಟರು ಮುಂದೆ ಸಾಗಿದರು.

# ರಕ್ತಾಕ್ಷಿ ಸಂವತ್ಸರದ ಮುನ್ನೋಟ

—ಕಾಶ್ಯಪ

ಎರಡು ಬಣಗಳ ಮುಖಂಡರೂ, ಅಲಿಪ್ತ ಬಣಗಳ ರಾಷ್ಟ್ರಗಳ ಲಿಪ್ತ ಮುಖಂಡರೂ ಪರಸ್ಪರ ಕೆಂಗಣ್ಣಿನಿಂದ ನೋಡುವ ವರ್ಷವಾದ್ದರಿಂದಲೇ ಇದಕ್ಕೆ ರಕ್ತಾಕ್ಷಿ ಸಂವತ್ಸರವೆಂದು ಹೆಸರು. ಒಂದು ರಾಷ್ಟ್ರಕರು ತಮ್ಮತಮ್ಮಲ್ಲೂ ಅನ್ಯ ರಾಕ್ಷಕರ ಮೇಲೂ ಕೆಂಗಣ್ಣು ಬಿಡುವುದು ಸಾಮಾನ್ಯವಾಗಿ ಕೆಳಕಂಡ ಸ್ಥಿರಶೀರ್ಷಿಕೆಗಳು ಪತ್ರಿಕೆಗಳಲ್ಲಿ ಕಂಡು ಬರುತ್ತವೆ.

1) ಅಸ್ಸಾಂ, ಪಂಜಾಬ್‌ಗಳಲ್ಲಿ ಗಲಭೆಗಳು;
2) ಮಧ್ಯಪೂರ್ವ ಯುದ್ಧಗಳ ಸಾವು ನೋವುಗಳು;
3) ಲೆಬನಾನ್‌ನಲ್ಲಿ ಯುದ್ಧವಿರಾಮ.
4) ಲೆಬನಾನ್‌ನಲ್ಲಿ ಗುಂಡಿನ ಚಕಮಕಿ.
5) ಲೆಬನಾನ್‌ನಲ್ಲಿ ಗುಳೇ ಕೀಳುವವರ ಸಂಖ್ಯೆ.
6) ವಿಮಾನ, ಹಡಗುಗಳ ಅಪಹರಣ.
7) ರೈಲು, ಮೋಟಾರುಗಳ ಡಿಕ್ಕಿ.
8) ಗ್ರಾಮಾಂತರ ದೊಂಬಿಗಳು.
9) ರಾಜಧಾನಿಗಳಲ್ಲಿ ಗಲಭೆ.
10) ಇತ್ಯಾದಿ.

**ಗ್ರಹಣಗಳು**

ದ್ವೇಷ, ಶೀತಲ ಸಮರಗಳೆಂಬ ಎರಡು ಗ್ರಹಣಗಳು ಮುಖ್ಯವಾದುದರಿಂದ ಈ ವರ್ಷ ಯಾವ ಗ್ರಹಣಗಳೂ ನಮ್ಮ ದೇಶದಲ್ಲಿ ಕಾಣಿಸುವುದಿಲ್ಲ. ಗ್ರಹಣಗಳ ಹಿಂದು ಮುಂದಿನ ವಾರಗಳಲ್ಲಿ ಗ್ರಹಣಕಾಲದಲ್ಲಿ ನಡೆಸಬೇಕಾದ ಧಾರ್ಮಿಕ ವಿಧಿಗಳನ್ನು ಅಲ್ಲಗಳೆಯುವ ಕಾಗದಗಳನ್ನು ಪತ್ರಿಕೆಗಳಲ್ಲಿ ಓದಿ ಜ್ಞಾನ ಸಂಪಾದನೆ ಮಾಡುವ ಅವಕಾಶಗಳು ತಪ್ಪಿಹೋಗುತ್ತವೆ.

**ನವ ನಾಯಕರು**

ಚಂದ್ರ ರಾಜ, ಶುಕ್ರ ಮಂತ್ರಿ, ಗುರು ಮೇಘಾದಿಪತಿ, ಕರಾವಳಿ ಹಾಗೂ ಪರ್ವತ ಪ್ರದೇಶಗಳಲ್ಲಿ ಮಳೆ, ನದಿಗಳಲ್ಲಿ ಭಾರೀ ಪ್ರವಾಹ, ಶನಿಯು ಆಹಾರಾಧಿಪತಿ, ಅಕ್ಕಿ

ಯಲ್ಲಿ ಮರಳು, ಕಲ್ಲು, ನುಚ್ಚುಗಳೂ, ತೊಗರಿಬೇಳೆಯಲ್ಲಿ ಕೇಸರಿಬೇಳೆಯೂ, ಮರದ ಹೊಟ್ಟಿನಲ್ಲಿ ತರಗೆಲೆಗಳ ಪುಡಿಯೂ, ಕಾಫಿಪುಡಿಯಲ್ಲಿ ಹುಣಿಸೇಪುಡಿಯೂ, ಚರಬಿಯಲ್ಲಿ ಮತ್ತೇತರ ಪಾನೀಯಗಳು ಮಿಶ್ರಿತವಾಗುವುದು--ಪ್ರಮಾಣದಲ್ಲಿ ಹೆಚ್ಚುತ್ತದೆ. ತದ್ವಿಭಾಗದ ವಿಜ್ಞಾನ ಅಭಿವೃದ್ಧಿಗೊಳ್ಳಲಿದೆ.

ಹಣಕ್ಕೆ ರವಿ ಅಧಿಪತಿಯಾದ್ದರಿಂದ ರೂಪಾಯಿ ಬೆಲೆ ಸುಟ್ಟುಹೋಗುವ ಸಂಭವವುಂಟು. ನೀರಸಾಧಿಪತಿಯೂ ರವಿಯಾದ್ದರಿಂದ ಸಾಹಿತ್ಯ, ಅಡುಗೆಗಳಲ್ಲಿ ರುಚಿ ಆವಿಯಾಗಿ ಹೋಗುತ್ತದೆ.

ಚಂದ್ರ, ಶುಕ್ರರು ರಾಜ ಮಂತ್ರಿಗಳಾಗುವುದರ ಜೊತೆಗೆ ಶ್ರೀಕೃಷ್ಣನು ಪಶುಪಾಲನೆಗೆ ತೊಡಗಿರುವುದರಿಂದ ಸ್ತ್ರೀ ಪುರುಷರು ವಿಷಯಾಸಕ್ತರಾಗುವರು. ತತ್ಫಲವಾಗಿ ಭ್ರಷ್ಟಾಚಾರವು ಹೆಚ್ಚುಹೆಚ್ಚಾಗಿ ಅದೇ ಶಿಷ್ಟಾಚಾರವೆಂದು ಸ್ವೀಕೃತವಾಗುವುದು. ಪತ್ರಿಕೆಗಳು ಪುಸ್ತಕ ಸಿನಿಮಾಗಳಲ್ಲಿ ಸೆಕ್ಸ್ ಕಾಟ ಅಭಿವೃದ್ಧಿ.

ಮಳೆಯು ಬಿದ್ದಾಗ ಬೀಳುವುದು. ಬಾರದಿದ್ದಾಗ ಬರುವುದೇ ಇಲ್ಲ. ಜನರು ಮುಂದುಗೆಟ್ಟವರಾಗಿ ಏನನ್ನೂ ನಿರೀಕ್ಷಿಸದೇ ಸಿನಿಮಾ, ಹೋಟೆಲು, ಕ್ಯಾಬರೇ, ದೊಂಬಿ ಹಿಂಸಾಚಾರಗಳಲ್ಲಿ ತೊಡಗುವರು. ಯಂತ್ರಾಧಿಪತಿಗಳ ಯತ್ನಗಳು ತಂತ್ರಾಧಿಪತಿಗಳಿಂದ ವಿಫಲವಾಗುವುವು.

## ದ್ವಾದಶ ರಾಶಿಯವರಿಗೆ ಫಲ

ಪೀಠಿಕೆ :

ದ್ವಾದಶ ರಾಶಿಗಳು, ನವಗ್ರಹಗಳು ಜ್ಯೋತಿಷಕ್ಕೆ ಅನಿವಾರ್ಯವು. ಹಾಗೆಯೇ ಸಾತ್ ಪರ್ ಜೀಸ್ ನಕ್ಷತ್ರಗಳೂ ಅನಿವಾರ್ಯವು. ಗ್ರಹ ಎನ್ನುವುದಕ್ಕೆ ಅಸ್ತಿತ್ವವಿಲ್ಲ ವ್ಯಾಪ್ತಿ ಅನ್ವಯಿಸುವುದಿಲ್ಲವೆಂಬ ವಾದ ವಿಫಲವು. ಜ್ಯೋತಿಷವು ಯುದ್ಧ, ದೊಂಬಿ, ಕೊಲೆ, ಅಶಾಂತಿ, ಅಪಘಾತಗಳನ್ನು ಸರಿಯಾಗಿ ಭವಿಷ್ಯ ಹೇಳುವುದೆಂಬುದು ನಿರೀಕ್ಷೆಗೆ ದೂರವು. ಅದನ್ನು ಹೇಳಲಿಲ್ಲ ಎಂಬುದು ಆಕ್ಷೇಪಣೆಯಲ್ಲವು. ವೈಜ್ಞಾನಿಕವಾಗಿರಬೇಕೆಂಬುದು ಅಪೇಕ್ಷಣೀಯವಲ್ಲವು. ಜನ್ಮಕುಂಡಲಿ, ನವಾಂಶಕುಂಡಲಿ, ಗೋಚಾರಫಲಗಳಿಂದಲೇ ಒಬ್ಬ ವ್ಯಕ್ತಿಯ ದೇಶದ ಪ್ರಾರಬ್ಧ ನಿರ್ಣಯವಾಗದು. ಯುರೇನಸ್, ನೆಪ್ಚೂನ್, ಪ್ಲೂಟೋ ಗ್ರಹಗಳು ಪೂರ್ವ ಜನ್ಮ ಕರ್ಮ ನಿರ್ಣಯಕಾರಕಗಳು. ಅಲ್ಲದೆ ಪ್ರಾರಬ್ಧವು ಅನಿವಾರ್ಯವು. ಇವನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಕೆಳಕಂಡ ಭವಿಷ್ಯ ಓದಿಕೊಳ್ಳಬೇಕು. ಕ್ಷುದ್ರ ಗ್ರಹಗಳ ಕಾಟವು ಹೇಳಲಸಾಧ್ಯವು.

ಮೇಷರಾಶಿ

ನಿಮ್ಮದು ದುಡುಕು ಸ್ವಭಾವ. ಟಗರುಗಳಿಗೆ ಕುರಿಗಳ ಕಾಟ ತಪ್ಪದು. ನಿಮ್ಮನ್ನ ಕಾಳಗಕ್ಕೆ ಹಚ್ಚಿ ನಿಮ್ಮನ್ನು ಕೊಯ್ದು ತಿನ್ನಬೇಕೆನ್ನುವವರ ಬಗೆಗೆ ಎಚ್ಚರ ಅಗತ್ಯ. ನಿಮಗೆ ಈ ವರ್ಷ ಗುರ ಬಲವೇ ಬಲ. ಅಷ್ಟಮಕ್ಕೆ ಶನಿ ಪಾದಾರ್ಪಣ ಮಾಡುವುದರಿಂದ ಒಪ್ಪತ್ತು ಊಟ ಈಗಿನಿಂದಲೇ ಅಭ್ಯಾಸ ಮಾಡಿಕೊಳ್ಳಿ. ಇದು ಧರ್ಮರಾಯನ ರಾಶಿಯಾದುದರಿಂದ ಜೀವನದುದ್ದಕ್ಕೂ ರೋತಿ. ಅದನ್ನು ಈ ವರ್ಷ ವಿಶೇಷ ಎಗಿ ಹೇಳಬೇಕಾದ್ದಿಲ್ಲ. ಸ್ತ್ರೀಯರು ಮೇಷಗಳ ಬಗ್ಗೆ ಎಚ್ಚರದಿಂದಿರಿ. ಇಮಿಟೇರ್ಷ ಒಡವೆ ಹಾಕಿಕೊಳ್ಳುವುದು ಕ್ಷೇಮ. ಗಂಡಂದಿರನ್ನು ಹೆಚ್ಚಿಗೆ ಸತಾಯಿಸಬೇಡಿ

ಲಡಕ್, ಅಸ್ಸಾಂಗಳು ಮೇಷರಾಶಿಗೆ ಸೇರಿವೆ. ಹೊರಗಿನಿಂದ ಒಳಗಿನಿಂದ ಗಂಡಾಂತರಗಳು ಅಭಿವೃದ್ಧಿಗೊಳ್ಳಲಿವೆ. ವ್ರತ, ಉಪವಾಸಗಳು ಕ್ಷೇಮಕಾರಕ.

ವೃಷಭ

ಉತ್ತರಪ್ರದೇಶ, ಒಡಿಸ್ಸಾಗಳು ವೃಷಭ ರಾಶಿಗೆ ಸೇರಿದವು. ಧೃತರಾಷ್ಟ್ರನ ರಾಶಿಯಾದ್ದರಿಂದ ಈ ವರ್ಷ ಗುರುಬಲವಿಲ್ಲ. ವೃಷಭಗಳು ಗೊಡ್ಡೆತ್ತುಗಳಾಗಬೇಕಾದೀತು-ಎಚ್ಚರಿಕೆಯಿಂದಿರಿ. ಡಕಾಯಿತರ ಹಾವಳಿ, ಒಪೆಕ್‌ನಲ್ಲಿ ಪೆಟ್ರೋಲಿಯಂ ಬೆಲೆ ಇಳಿದಿದ್ದರೂ ಬಜೆಟ್ ಪೂರ್ವದಲ್ಲೇ ಡೀಸೆಲ್ ಪೆಟ್ರೋಲ್ ಬೆಲೆ ಏರಿಕೆ, ಕೇಂದ್ರದಲ್ಲಿ ಪ್ರಣಬ್ ರಾಜ್ಯದಲ್ಲಿ ಹೆಗ್ಗಡೆ ಮಹಾಶಯರಿರುವುದರಿಂದ ಹೊರಗೆ ಅಡ್ಡಾಡುವುದು ಬಲುದುಬಾರಿಯಾಗಬಹುದು. ಲಗ್ನಾತ್ ನಿಮ್ಮ ಪತ್ನಿಯಿರುವುದರಿಂದ ಮನೆಯಲ್ಲಿ ಏರುಪೇರು ಸಹಜ. ತ್ರಿಕೋನದಲ್ಲಿ ಕ್ರೂರಗ್ರಹಗಳ ದೃಷ್ಟಿಯಿರುವುದರಿಂದ ಸಹಜ ಪ್ರವೃತ್ತಿಗೆ ಸಾಮಾಜಿಕ ಅಡ್ಡಿಯೊಂದೇ ಅಡಚಣೆಯಾಗಲಿದೆ. ನಿಮ್ಮ ನಡೆನುಡಿಯನ್ನು ಚೆನ್ನಾಗಿ ಹದ್ದುಬಸ್ತಿನಲ್ಲಿಟ್ಟುಕೊಂಡಿರುವುದು ಗಿಟ್ಟುತ್ತದೆ. ಸ್ತ್ರೀ ಸಂಬಂಧದ ಚಿಂತೆಯನ್ನು ಬೆಳೆಸಿಕೊಂಡರೆ ಅಪವಾದ ಭಯ ತಪ್ಪಿದ್ದಲ್ಲ. ವೃಷಭ ರಾಶಿಯು ವೈಶ್ಯ ವರ್ಣದಾದ್ದರಿಂದ ನೀವು ಗುಪ್ತಧನ ಇಟ್ಟುಕೊಳ್ಳುವ ಸಂಭವವಿದೆ. ಆಗ ಇನ್ಕಂಟ್ಯಾಕ್ಸ್ ಹಾವಳಿ ತಪ್ಪಿದ್ದಲ್ಲ. ನಿಮಗೆ ಹಸ್ತ ನಕ್ಷತ್ರವು ಘಾತಕವಾದ್ದರಿಂದ, ಸದ್ಯಕ್ಕೆ ರಾಜಕೀಯದಲ್ಲಿ ಗಲಿಬಿಲಿ ಕಾಲವು

ಮಿಥುನ ರಾಶಿ

ಕರ್ನಾಟಕವು ಮಿಥುನ ರಾಶಿಗೆ ಸೇರಿದ್ದು. ಪುಷ್ಯಮಾಸದವರೆಗೂ ಗುರುಬಲವಿದ್ದೀತು. ಹತ್ತಿಬಟ್ಟೆಗೆ ಟ್ಯಾಕ್ಸ್ ರಿಯಾಯಿತಿ ಇರುವುದರಿಂದ ವಸ್ತ್ರಲಾಭವಾದರೂ,



"ನನಗೆ ನಿಜವಾಗಲೂ ದುಃಖವಾಗಿದೇ ಅಂತ ಇನ್ನೆಷ್ಟು ಸಲ ಹೇಳ್ಲಿ !"

ಇಸ್ತ್ರಿ ಮಾಡಲು ಪಡುವ ಚಿಂತೆಯೇ ನಿಮಗೆ ತ್ರಾಸವು. ಪುಷ್ಯಮಾಸದ ನ. ಗುರು ಬಲವಿಲ್ಲ. ಶನಿಬಲವೂ ಇಲ್ಲ ಫಲ ಬುದ್ಧಿಮಾಂದ್ಯ, ಸ್ತ್ರೀಚಿಂತೆ. ...ದರೆ ಈ ರಾಶಿಯವರಿಗೆ ಕೊನೆಮೊದಲಿಲ್ಲದ ಫಾಸಿ ತಪ್ಪಿದ್ದಲ್ಲ ಸಿನಿಮಾ ಥೇಟರಿನಲ್ಲೂ. ಆದರ ದಾರಿಯಲ್ಲೂ ಕಲ್ಲು ತೂರಾಟ. ಧಾಡಸೀ ಜಂಗೀ ಹೋರಾಟಗಳು ನಗರಗಳಲ್ಲಿ ಅನಿವಾರ್ಯವಾದುದರಿಂದ, ಮನೆಯಲ್ಲೇ ಕುಳಿತು ಸಿನಿಮಾ ಪತ್ರಿಕೆಗಳನ್ನೋದಿ. ನೀವು ದಾನ ಧರ್ಮ ಪರೋಪಕಾರ ಮಾಡಲು ಹೋದರೆ ಕೈಗೆ ಚಿಪ್ಪೇ ಖಾಯಂ ಹಣ ಸಂಪಾದನೆಯು ಹೆಚ್ಚು ವೈಜ್ಞಾನಿಕ. ಸೆಕ್ಸ್ ಸಾಹಿತ್ಯ ಓದುವುದರಿಂದ ನಿಮ್ಮ ತಳಮಳ ಹೆಚ್ಚುವುದು.

**ಕರ್ಕ ರಾಶಿ**

ಸರ್ಕಾರದ ಉಪದ್ರವ, ಜನರಿಂದ ಪೀಡೆ, ಸಾಲಗಾರರ ಕಾಟ, ಧನಹಾನಿಗಳು ಈ ವರ್ಷ ನಿಮಗೆ ಸಾಕುಸಾಕೆನಿಸುವುವು. ಇವು ಇಲ್ಲದವರು ಯಾರೂ ಇಲ್ಲ ಎಂದು ಸಮಾಧಾನ ಪಟ್ಟುಕೊಳ್ಳಿ. ಕಾರಿನಲ್ಲಿ ಓಡಾಡುವವರು ಪುಣ್ಯವಂತರೆಂದು ಭಾವಿಸಬೇಡಿ, ಅವರು ಕಾರುಕಳ್ಳರಿರಬಹುದು, ಇಲ್ಲವೋ ಅವರ ಕಾರು ಕಳುವಾಗುವ ಸಂಭವವೇ ಹೆಚ್ಚು.

ಹಿಮಾಚಲ ಪ್ರದೇಶವು ಕರ್ಕಾಟಕ ರಾಶಿಯ ವ್ಯಾಪ್ತಿಯಲ್ಲಿ ಬರುವುದರಿಂದ ಅಲ್ಲಿ ಹಿಮಪಾತ ಹೆಚ್ಚು.

ಸಂಜೆ 5 ಗಂಟೆಯ ನಂತರ ಹೊರಗೆ ಹೋಗಬೇಡಿ. ನಡೆದು ಹೋಗುತ್ತಿದ್ದರೆ ಚಾಕು ತೋರಿಸಿ ಜೇಬಿನಲ್ಲಿದ್ದ ಚಿಲ್ಲರೆ ಕಸಿದುಕೊಳ್ಳುತ್ತಾರೆ. ಕಾರಿನಲ್ಲಿ ಹೋದರೆ ಗಾಜು ಪುಡಿಪುಡಿ ಮಾಡುವ ಕಲ್ಲುಗಳು ಬೀಳುತ್ತವೆ. ಹೋಟಲಿನಲ್ಲಿ ತಿಂಡಿ ಬೆಲೆ ಇಳಿದಿದೆ ಎಂದು ಸುಗ್ಗಬೇಡಿ. ಹದಿನೈದು ದಿನ ಹಿಂದೆ 60 ಪೈಸಾ ಇದ್ದ ಕಾಫಿಗೆ ಹದಿನಾಲ್ಕು ದಿನ ಹಿಂದೆ 80 ಪೈಸೆ ಬೆಲೆ ಕೊಟ್ಟು ಈಗ 75 ಪೈಸೆಗೆ ಇಳಿಸಿದ್ದಾರೆ. ಮನೆ ರಾಗಿ ಮುದ್ದೆಯೇ ಮೇಲು.

ನಿಮ್ಮ ಕಣ್ಣು ಯಾವಾಗಲೂ ಕುಂಭರಾಶಿಯ ಮೇಲೆ. ಥಳುಕಿಗೆ ಮರುಳಾಗಬೇಡಿ.

**ಸಿಂಹ**

ನಿಮಗೆ ಈ ವರ್ಷ ಅರವತ್ತು ಪೈಸೆ ಶುಭಫಲವೆಂದು ಸಿದ್ಧಾಂತ ಭಾಸ್ಕರರು

ನಿರ್ಣಯಿಸಿದ್ದಾರೆ. ರೂಪಾಯಿಗೆ ಹದಿನಾರಂ ಪೈಸೆ ಆದ್ದರಿಂದ ನಿಮಗೆ ನಿಜವಾಗಲೂ 9.6 ಪೈಸೆ ಶುಭಫಲವು.

ಸಿಂಹಗಳು ಹಿಂದೆ ವನರಾಜಗಳಾಗಿದ್ದವು. ಈಗ ಅವು ಹುಲ್ಲುಗಾವಲುಗಳಿಗೆ ಬಂದಿವೆ. ಅಲ್ಲಿ ನೀಲಗಿರಿ ಮರಗಳಿರುವುದರಿಂದ ನಿಮಗೆ ವನವಾಸಕ್ಕೂ ದಕ್ಕುವುದಿಲ್ಲ.

ಗುರುಬಲವಿರುವುದರಿಂದ ನಿಮಗೆ ಪುಢಾರಿಗಳಾಗಿದ್ದರೆ ಸರ್ಕಾರದಲ್ಲಿ ಮನ್ನಣೆ. ಆದರೆ ಶನಿದೇವನು ಅರ್ಧಾಷ್ಟಮದಲ್ಲಿರುವುದರಿಂದ ಪಾಪಕೆಲಸದಲ್ಲಿ ಆಸಕ್ತಿ, ಚಿತ್ತ ಚಾಂಚಲ್ಯ, ದುಷ್ಟಜನರ ಸಹವಾಸ, ಹೆಂಡತಿಯು ಹೆಚ್ಚು ಪ್ರೀತಿಯಿಂದ ಕಂಡಳೆಂದು ಹಿಗ್ಗಬೇಡಿ. ಅವಳ ಆಶೆ ಪೂರೈಸುವ ಶಕ್ತಿಯಿಲ್ಲ; ಸಂಬಳವನ್ನು ಅವಳ ಕೈಗೇ ಕೊಟ್ಟು, ಗಿಂಬಳವನ್ನು ಖರ್ಚಿಗೆ ಉಳಿಸಿಕೊಳ್ಳಿ.

## ಕನ್ಯಾರಾಶಿ

ಇದು ಪಂಜಾಬಿನ ರಾಶಿ. ಆದುದರಿಂದ ಹಲವು ಮಂದಿ ಅಧಿಕಾರಕ್ಕಾಗಿ ಕಿತ್ತಾಟ ನಡೆಸುವುದು ಸಂಭವನೀಯ. ಸಿಟ್ಟಿನ ಭರದಲ್ಲಿ ಈ ರಾಶಿಯವರು ಏನನ್ನಾದರೂ ಮಾಡಿದರೆ ಪಶ್ಚಾತ್ತಾಪ ತಪ್ಪಿದ್ದಲ್ಲ. ನಿಮ್ಮ ಸುತ್ತಲೂ ತಿರುಗಾಡುವವರ ಸಂಖ್ಯೆ ಹೆಚ್ಚು. ಮೋಟರ್‌ಸೈಕಲ್ಲುಗಳಿಂದ ದೂರವಿರಿ. ನಿಮಗೆ ಶ್ರವಣ ನಕ್ಷತ್ರವು ಘಾತಕ ವಾದ್ದರಿಂದ ಕಂಡವರ ಮಾತಿಗೆ ಕಿವಿಗೊಟ್ಟುದೇ ಆದರೆ ಆಪತ್ತು ತಪ್ಪಿದ್ದಲ್ಲ.

ಈ ವರ್ಷದಾದ್ಯಂತ ಸರಕಾರದಲ್ಲಿ ಖಾಸಗೀರಂಗದಲ್ಲಿ ನಿಮ್ಮ ಕೆಲಸವಾಗುವುದಿಲ್ಲ. ಕೆಲಸ ಸಿಕ್ಕರೆ ನಿಮ್ಮದು ಗೃಹಿಣೀ ರಾಶಿಯಾಗುತ್ತದೆ. ಕನ್ಯಾರಾಶಿತ್ವವನ್ನು ಉಳಿಸಿಕೊಳ್ಳಲು ಅಖಂಡ ತಪಶ್ಚರ್ಯ ಅತ್ಯಗತ್ಯ. ಏಕೆಂದರೆ ಫ್ರಾಯ್ಡನ ಹಿಂಬಾಲಕರು ನಿಮ್ಮನ್ನು ಮನ್ನಿಸುವುದಿಲ್ಲ.

## ತುಲಾ ರಾಶಿ

ನಿಮ್ಮ ಜೀವನವೇ ತಕ್ಕಡಿಯಲ್ಲಿದೆ. ಬೆಪ್ಪುತಕ್ಕಡಿಗಳಾಗಬೇಡಿ. ಗುರುಬಲ, ಶನಿಬಲಗಳಿಲ್ಲದ್ದರಿಂದ ಕ್ಷುದ್ರ ಗ್ರಹಗಳ ಕಾಟ ಹೆಚ್ಚೀತು. ನಿಮ್ಮ ಕ್ಷೇತ್ರದಲ್ಲಿ ಕೊನೆಯ ಪಕ್ಷ 8-10 ಅಭ್ಯರ್ಥಿಗಳು ಚುನಾವಣೆಗೆ ನಿಂತು, ವೋಟಿನ ಬೇಟೆಗೆ ಹೊರಟಾರು. ಆಲೋಚಿಸಿದ ಕೆಲಸಗಳು ಕೆಡುವುವು. ಬಸ್ಸು ಸಮಯಕ್ಕೆ ಸರಿಯಾಗಿ ಬಾರದು. ಫಿಲ್ಮ್ ಷೋ ನಡುವೆ ಪವರ್ ಕಟ್, ಡೈನಮೋ ಭಗ್ನ, ಕಾಫಿ ಕಹಿ, ಸಾಫ್ಟ್ ಡ್ರಿಂಕ್ಸ್‌ನಲ್ಲಿ ಬರಿ

ನೀರು, ಹಾಟ್ ಡ್ರಿಂಕ್ಸ್ ಎಲ್ಲಾ ನಕಲಿ, ರೇಡಿಯೋ ಪ್ರೋಗ್ರಾಂನಲ್ಲಿ ತಲೆನೋವು, ಟಿ.ವಿ.ಯಲ್ಲಿ ತಲೆಕೆಳಗು ಚಿತ್ರ. ಸಾಹಿತ್ಯ ಕೃತಿಗಳೆಲ್ಲಾ ಕೃತಿಚೌರ್ಯದಿಂದ ತುಂಬಿದ್ದು, ನಾಟಕಗಳಲ್ಲೆಲ್ಲಾ ಬರೀ ಘೋಷಣೆ, ಒಟ್ಟಿನಲ್ಲಿ ಮನಭಂಜನೆ. ಸುಖ ಮುಂದಿನ ವರ್ಷ, ಮನಸ್ಸು ಡೋಲಾಯಮಾನ. ಹೀಗೋ ಹಾಗೋ ಇನ್ನೊಂದು ತರಹವೋ ಅಲ್ಲವೋ ಹೌದೋ. ಆಡಳಿತ ಪಕ್ಷವೋ ವಿರೋಧಿಗಳೋ, ಏನೋ ಎಂತೋ. ಬಡ್ತಿ ದೊರೆತರೆ ಟ್ಯಾಕ್ಸ್‌ನಿಂದ ನಷ್ಟ.

ಹೇಗೂ ಕೆಡುವುದು ಖಾಯಂ ಆದ್ದರಿಂದ ಸತ್ಯವೇ ಗತಿ ಎಂದರೆ ನಿಮಗೆ ಅಧಃಪಾತಾಳವೇ ಕಟ್ಟಿಟ್ಟದ್ದು. ಏಕೆಂದರೆ ವ್ಯವಹಾರವೆಲ್ಲಾ ಸುಳ್ಳೇ.

ವೃಶ್ಚಿಕ ರಾಶಿ

ಈ ರಾಶಿಯು ಬ್ರಹ್ಮವರ್ಣವಾದ್ದರಿಂದ ಈ ರಾಶಿಯವರಿಗೆ ಧಿಕ್ಕಾರ, ವಿರೋಧ ಪ್ರದರ್ಶನ, ಸಂಕಟಗಳೇ ಹೆಚ್ಚು. ಇದು ಕಲಿಯುಗವಾದ್ದರಿಂದ ನಿಮಗೂ ವಿರೋಧಿಗಳನ್ನು ಬಾಲದಿಂದ ಕುಟುಕುವ ಚಾಳಿ ಬೆಳೆವ ಸಂಭವ. ಆ ಚಪಲವನ್ನು ಬಿಟ್ಟು ನೀವೂ ಧಿಕ್ಕಾರ ಹಾಕಲಾರಂಭಿಸಿ, ಆಗ ನೀವು ಪ್ರಜ್ಞಾವಂತರೂ, ಪ್ರಗತಿಪರರೂ ಎಂದು ಬೊಬ್ಬೆಯಿಡಲು ಸಾಧ್ಯವಾಗುತ್ತದೆ. ನುಡಿದಂತೆ ನಡೆದವರು ಮುಗ್ಧರೆನ್ನಿಸಿಕೊಂಡು ಸಂಕಟ ಪಡುತ್ತಾರೆ ಎಚ್ಚರ. ಸರ್ಕಾರಿ ನೌಕರರಾದರೆ ಇನ್ನು ನಾಲ್ಕಾರು ಕಂತು ತುಟ್ಟಿಭತ್ಯ ಸಿಕ್ಕರೂ ಮುದ್ದೆಯ ಸೋರೆ ಲೊಟಗುಟ್ಟುತ್ತದೆ. ಡೈರಿ ಹಾಲೆಲ್ಲಾ ನೀರು, ಸೀಮೆಎಣ್ಣೆ ಸಿಕ್ಕದು, ನೀವು ಹತ್ತಿದ ಬಸ್ಸಿನ ಕಂಡಕ್ಟರು ಪ್ರಾಮಾಣಿಕ. ಸಿ.ಎಲ ಕೇಳಿದರೂ ಕೈಬಿಸಿ ಮಾಡದೆ ಸಿಕ್ಕದು. ಪಾರ್ಟಿಗೆ ಕರೆದೊಯ್ದರೂ ಹುಡುಗಿ ಒಪ್ಪುವುದಿಲ್ಲ. ಯಾರನ್ನೂ ಬೈಯಲು ಹೋಗಬೇಡಿ. ಪತ್ರಿಕೋದ್ಯಮ ಇದ್ದಿದ್ದರಲ್ಲಿ ವಾಸಿ.

ಧನುಸ್ಸು

ಬೆನ್ನು ಬಾಗಿಸಿ ಈ ಪ್ರಜಾಪ್ರಭುತ್ವ, ಈ ವಿಜ್ಞಾನ, ಈ ಪರಿಸರ ಮಾಲಿನ್ಯಗಳಿಂದ ನಲುಗಿರುವ ನಿಮಗೆ ಈ ವರ್ಷ ಲಾಭದಲ್ಲಿದ್ದ ಶನಿಮಹಾರಾಜನು ವ್ಯಯಕ್ಕೆ ಹೋಗಲಿರುವುದರಿಂದ ಕೈ ಖಾಲಿ, ದುಡಿದದ್ದೆಲ್ಲಾ ಕಂಡವರ ಪಾಲಿಗೆ, ತುತ್ತು ಕೈಗೂ ಬಾರದು, ಬಾಯಿಯಲ್ಲಿ ಜೊಲ್ಲು ಮಾತ್ರ ಸುರಿಸಬೇಕಾದೀತು. ಗುರುಬಲವೂ ಅಷ್ಟಕ್ಕಷ್ಟೇ. ಸ್ವಾಮಿನಃ, ಮಹಾಭಾಗಾಃ ಚುನಾವಣೆ ತಂಟೆಗೆ ಹೋಗದಿರಿ. ಕರೆದು ದುಡ್ಡು ಕೊಡುತ್ತಾರೆ. ಆಮೇಲೆ ಚುನಾವಣೆಗೋಸ್ಕರ ಪೋಲೀಸ್ ಸ್ಟೇಷನ್, ಕೋರ್ಟ್ ಓಡಾಟಗಳಲ್ಲಿ ಕತ್ತೆಯ ಜೊತೆಗೆ ಗೂಟವೂ ಕಿತ್ತುಕೊಂಡು ಹೋದೀತು. ಮಳೆ ಕಡಮೆ

ಯಾಗಿ, ಬಾವಿಗಳು ಬತ್ತಿ, ತರಕಾರಿ ದುರ್ಲಭವಾಗಿ, ವಿಟಮಿನುಗಳನ್ನು ಪಿಲ್ಸ್‌ನಲ್ಲೇ ಸೇವನೆ ಮಾಡಬೇಕಾದೀತು. ಜೀವನ ಪಿಕ್‌ನಿಕ್ ಅಲ್ಲ. ನೀವು ಶೋಷಿತ ಕಾರ್ಮಿಕರು ಈ ವರ್ಷ. ಇನ್ನೂ ಎಂಟು ವರ್ಷ, ಸುಖದ ದಿನ ಎಂದೋ ಬಂದಾವು. ಸದ್ಯಕ್ಕೆ ಸಿಕ್ಕಷ್ಟೆ ಸಿದಬಸ್ಸ ಎಂದು ಖುಷಿಪಡಿ. ತಣ್ಣೀರನ್ನು ಆರಿಸಿ ಕುಡಿಯಿರಿ.

ಮಕರ ರಾಶಿ

ನಿಮಗೂ ಧನುಸ್ಸಿನಂತೆ ಬಾಗುವ ಕಾಲವಿದ್ದರೂ, ಒಂದು ಸವಲತ್ತಿದೆ. ಬುದ್ಧಿ ಮಕರಾದ್ದರಿಂದ ದುಃಖಾನುಭವವಿಲ್ಲ. ಸಂಬಳ ಹತ್ತನೇ ತಾರೀಖು ಬಂದರೂ, ಹನ್ನೊಂದನೇ ತಾರೀಖು ತೀರುವೆ ಬೇಡುವ ಸ್ಥಿತಿ ಬಂದರೂ, ಜೇಬಿನಲ್ಲಿ ದುಡ್ಡಿಲ್ಲದಿದ್ದರೂ, ಇದ್ದರೂ, ಸಾರ್ವಜನಿಕ ಶಾಂತಿ ಭಂಗವಾದರೂ, ಜೀವನ ಅಸಹನೀಯವಾದರೂ ನೀವು ಅದನ್ನು ಗಮನಿಸುವ ಬುದ್ಧಿಮತ್ತೆಯನ್ನು ಹೊಂದಿಲ್ಲ—ಸದ್ಯಕ್ಕೆ ಸಾಲದಿಂದಲೇ ಬಾಳು. ಲಾಟರಿ ಕೊಂಡರೆ ಲಾಟರಿ ಹೊಡೆದೀರಿ. ವರ್ಷದ ಕೊನೆಗೆ 5 ರೂ. ಸಿಕ್ಕೀತು ಲಾಟರಿಯಲ್ಲಿ.

ಕುಂಭ ರಾಶಿ

ಸುಮ್ಮನೆ ಅವರಿವರ ಮಾತು ಕೇಳಿ ಪ್ರಗತಿಪರ ಮಾನವ ಕುಲಕ್ಕೆ ಸೇರಿದ್ದೇನೆಂದು ಭಾವಿಸಿ ಕೆಡಬೇಡಿ. ಸ, ಸಿ, ಸು, ಸೆ ಎಂದು ನಿಮ್ಮ ಹೆಸರುಗಳು ಆರಂಭವಾಗುತ್ತವೆ. ಸುಮ್ಮನಿರುವುದನ್ನು ಅಭ್ಯಾಸ ಮಾಡಿ. ಏನು ಹೇಳಿದರೂ ಅದು ಯಾರಿಗಾದರೂ ವಿರೋಧವೆನ್ನಿಸಿ ಮನೆ ಮುಂದೆ ಜನ ಜಮಾಯಿಸಿಯಾರು. ನಿಮ್ಮ ಮೇಲೆ ಎಲ್ಲರ ಕಣ್ಣು, ದುಷ್ಟರ ನೋಟಗಳಿಂದ ದೂರವಿರಿ. ನಿಮ್ಮ ಉದ್ಧಾರಕರನ್ನು ಬಹಿಷ್ಕರಿಸಿ, ಬಾಳುವೆಯನ್ನು ಮನಸಿಟ್ಟು ನಡೆಸಿರಿ. ಸುಖ, ದುಃಖಗಳಿಂದ ಚಲಿತರಾಗಬೇಡಿ. ಒಜೆಟ್ ರಿಯಾಯಿತ್ತಿಯಿಂದ ಬೆಲೆಗಳಿಳಿಯುವುದಿಲ್ಲ. ವಿಶ್ವಬ್ಯಾಂಕ್ ಸಾಲದಲ್ಲಿ ಒಂದು ಡಾಲರೂ ನಿಮ್ಮ ಕೈಗೆ ಸಿಕ್ಕದು. ನಿಮ್ಮ ಗ್ರಾಮವನ್ನು ಯಾರು ದತ್ತು ತೆಗೆದುಕೊಂಡರೂ ನಿಮಗೆ ಒಂದು ಕಾಸು ಲಾಭವಿಲ್ಲ. ಭಗವಂತನನ್ನು ನೆನೆಯಿರಿ.

ಮೀನ ರಾಶಿ

ನೀವೇ ಮನುಷ್ಯ ಕುಲದ ಪ್ರತಿನಿಧಿಗಳು. ನಿಮಗೆ ಗಾಣ ಹಾಕಲು ಸರ್ವೇ ಸಮಸ್ತ ಆಮಿಷಗಳು ಕಾದಿವೆ. ನಿಮ್ಮ ಜಾಡಿಗೆ ನೀವಿದ್ದರೆ, ನಿಮ್ಮ ಕರ್ಮವನ್ನು ಮಾಡುತ್ತಾ, ಅನುಭವಿಸುತ್ತಾ ಇದ್ದರೆ ಸಾಕು. ದುಡುಕಬೇಡಿ, ಇಲ್ಲದ ಸ್ವರ್ಗಕ್ಕೆ ಮೋಟು ಏಣಿ ಹಾಕಿ ವೃಥಾ ಯತ್ನ ಮಾಡಬೇಡಿ.

"ನಗುವು ಸಹಜ ಧರ್ಮ : ನಗಿಸುವುದು ಪರಧರ್ಮ !
ನಗುವ ಕೇಳುತ, ನಗುವುದತಿಶಯದ ಧರ್ಮ ॥
ನಗುವ, ನಗಿಸುವ, ನಗಿಸಿ ನಗುತ ಬಾಳುವ ವರವ !
ಮಿಗೆ ನೀನು ಬೇಡಿಕೊಳೊ — ಮಂಕುತಿಮ್ಮ ॥"



ಶುಭಾಶಯಗಳೊಂದಿಗೆ— 

No 23 AL/84-NT III

**ಸಣ್ಣ ಕೈಗಾರಿಕೋದ್ಯಮಿ ಯಾರು ?**

"ಸಣ್ಣ ಕೈಗಾರಿಕೋದ್ಯಮಿ ಹಲವು ಕುರುಡರು ನೋಡಿದ ಆನೆಯಂತೆ. ಕೇವಲ ಹೋರಾಟಕ್ಕಾಗಿ ಹೋರಾಡುವ ಕಾರ್ಮಿಕ ನಾಯಕನಿಗೆ, ಈತ ದಲಿತರನ್ನು ಶೋಷಿಸುವ ಕ್ರೂರರಾಕ್ಷಸ. ದೊಡ್ಡ ಕೈಗಾರಿಕೆಗಳ ಗ್ರಾಹಕರಿಗೆ, ಸಣ್ಣ ಕೈಗಾರಿಕೆ ಒದಗಿಸುವ ಸಾಮಗ್ರಿಗಳಿಗೆ ಹಣ ಸಂದಾಯ ಮಾಡುವ ಜರೂರು ಇಲ್ಲದಿರುವುದರಿಂದ ಈತ ಸುಲಭವಾಗಿ ಸಿಗುವ ಸಂಪನ್ಮೂಲ. ಲಂಚವಂತನಾದ ಸರ್ಕಾರಿ ಅಧಿಕಾರಿಗೆ ಈತ ಯಾವಾಗಲೂ ಸಿದ್ಧವಾಗಿರುವ ಕಾಮಧೇನು. ಸರ್ಕಾರಿ ಯೋಜನಾ ಅಧಿಕಾರಿಗಳಿಗೆ ಸಣ್ಣ ಕೈಗಾರಿಕೋದ್ಯಮಿ ನಿರುದ್ಯೋಗ ನಿವಾರಕ ತಾರಕ ಮಂತ್ರ. ಹಣ ಒದಗಿಸುವ ಬ್ಯಾಂಕ್ ಅಧಿಕಾರಿಗಳಿಗೆ, ಈತ ತನ್ನ ಉದ್ಯಮದ ಹಣಕಾಸನ್ನು ಸ್ವಂತಕ್ಕಾಗಿ ಬಳಸುವ ಕಿಲಾಡಿ. ಕಳೆದ ಒಂಭತ್ತು ವರ್ಷಗಳಿಂದ ಸಣ್ಣ ಕೈಗಾರಿಕೋದ್ಯಮವನ್ನು ನಡೆಸಿ ಇನ್ನೂ ಉಳಿದಿರುವ ನನ್ನ ಅನಿಸಿಕೆಯಲ್ಲಿ ಇಂದಿನ ಒಬ್ಬ ಸಣ್ಣ ಕೈಗಾರಿಕೋದ್ಯಮಿ ಅತ್ಯಂತ ಚತುರತೆ ಹಾಗೂ ಸಮಯ ಸ್ಫೂರ್ತಿಯನ್ನು ಪಡೆದ ಸರ್ಕಸ್ ಆಟಗಾರ."

—ಎನ್. ನರಸಿಂಹನ್